ಪರಂತು, ವಿಶ್ವವಿದ್ಯಾಲಯವು ಹಣಕಾಸು ಸಮಿತಿ ಮತ್ತು ಮಂಡಳಿಯೊಡನೆ ಸಮಾಲೋಚಿಸಿ ತಾನು ನಿರ್ಧರಿಸಬಹುದಾದಂತಹ ವಿಧಾನದಲ್ಲಿ ಭವಿಷ್ಯ ನಿಧಿಯ ಮೊಬಲಗನ್ನು ತೊಡಗಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

**42. ಸರ್ಕಾರದ ಅನುದಾನಗಳು.–** (1) ರಾಜ್ಯ ಸರ್ಕಾರವು, ಪ್ರತಿ ವರ್ಷವೂ ವಿಶ್ವವಿದ್ಯಾಲಯಕ್ಕೆ ಲುಪ್ತವಾಗದಂತಹ ಇಡಿಗಂಟು ಅನುದಾನವನ್ನು ನೀಡತಕ್ಕದ್ದು, ಎಂದರೆ :–

(ಎ) ವಿಶ್ವವಿದ್ಯಾಲಯದ ಸೂಕ್ತ ಕಾರ್ಯನಿರ್ವಹಣೆಗಾಗಿ ವಿಶ್ವವಿದ್ಯಾಲಯದ ಸಿಬ್ಬಂದಿಯ ವೇತನ, ಭತ್ಯೆಗಳು, ಸಾದಿಲ್ವಾರು, ಇತರ ಸರಬರಾಜು ಮತ್ತು ಸೇವೆಗಳ ಮೇಲಿನ ಅಂದಾಜು ವೆಚ್ಚಕ್ಕಿಂತ ಕಡಿಮೆಯಲ್ಲದ ಒಂದು ಅನುದಾನ;

(ಬಿ) ರಾಜ್ಯ ಸರ್ಕಾರವು ವಿಶ್ವವಿದ್ಯಾಲಯದ ಸೂಕ್ತ ಕಾರ್ಯನಿರ್ವಹಣೆಗಾಗಿ ಅವಶ್ಯವೆಂದು ಭಾವಿಸಬಹುದಾದಂತಹ ಹೆಚ್ಚುವರಿ ಬಾಬುಗಳ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳನ್ನು ಭರಿಸುವುದಕ್ಕೆ ಒಂದು ಅನುದಾನ.

(2) ರಾಜ್ಯ ಸರ್ಕಾರವು, ಪಂಚವಾರ್ಷಿಕ ಯೋಜನೆಯಲ್ಲಿ ಸೇರಿಸಿದ ಮತ್ತು ವಿಶ್ವವಿದ್ಯಾಲಯವು ಜಾರಿಗೊಳಿಸಲೆಂದು ವರ್ಗಾಯಿಸಿದ ಯೋಜನೆಗಳ ಸಂಬಂಧದಲ್ಲಿ ವಿಶ್ವವಿದ್ಯಾಲಯಕ್ಕೆ ಕೇಂದ್ರ ಸರ್ಕಾರ ಮತ್ತು ಅಂತಹ ಯೋಜನೆಗಳನ್ನು ಪ್ರಾಯೋಜಿಸಿದ ಇತರ ಏಜೆನ್ಸಿಗಳಿಂದ ನಿರೀಕ್ಷಿತ ಸಹಾಯವನ್ನು ಕಳೆದ ತರುವಾಯ ವಾರ್ಷಿಕ ಯೋಜನೆಯಲ್ಲಿ ತೋರಿಸಿದ ನಿವ್ವಳ ವೆಚ್ಚದ ಏರ್ಪಾಡಿಗೆ ಸಮನಾದ ಮೊತ್ತದ ಲುಪ್ತವಾಗದಂತಹ ಇಡಿಗಂಟು ಅನುದಾನವನ್ನು ಸಹ ನೀಡತಕ್ಕದ್ದು.

(3) ರಾಜ್ಯ ಸರ್ಕಾರವು ಯಾವುದೇ ಅನುದಾನವನ್ನು ನೀಡುವ ಮೊದಲು ಅದು ಅಗತ್ಯಪಡಿಸಬಹುದಾದಂತಹ ಅಂಕಿಅಂಶಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾಲಯವು ಸಲ್ಲಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂತಹ ಅವಧಿಯೊಳಗೆ ಹಾಗೂ ಅಂತಹ ವಿಧಾನದಲ್ಲಿ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಯಾವುದೇ ಅನುದಾನವನ್ನು ಬಳಸಿಕೊಂಡಿರುವುದಕ್ಕೆ ಸಂಬಂಧಪಟ್ಟ ಅಂಕಿಅಂಶಗಳು, ಲೆಕ್ಕಪತ್ರಗಳು, ವರದಿಗಳು ಹಾಗೂ ಇತರ ವಿವರಗಳನ್ನು ಒದಗಿಸತಕ್ಕದ್ದು.

(4) ವಿಶ್ವವಿದ್ಯಾಲಯವು ಸರ್ಕಾರದಿಂದ ಅಥವಾ ಯಾವುದೇ ಇತರ ರಾಜ್ಯ ಸರ್ಕಾರಗಳಿಂದ ಅಥವಾ ಕೇಂದ್ರ ಸರ್ಕಾರದಿಂದ ಅಥವಾ ಶಾಸನಾತ್ಮಕ ನಿಕಾಯಗಳಿಂದ ಅಥವಾ ದತ್ತಿಗಳಿಂದ ಅಥವಾ ದಾನಗಳಿಂದ, ವಿಶ್ವವಿದ್ಯಾಲಯವು ಮತ್ತು ದಾನಿ ಅಥವಾ ಅನುದಾನದಾತರ ನಡುವೆ ಮಾಡಿಕೊಂಡ ಒಪ್ಪಂದಗಳಲ್ಲಿಯ ಷರತ್ತುಗಳಿಗೆ ಒಳಪಟ್ಟು ತನ್ನ ಧ್ಯೇಯೋದ್ದೇಶಗಳ ಸಾಧನೆಗಾಗಿ ಅನುದಾನ ಸ್ವೀಕರಿಸಲು ಸಕ್ಷಮವಾಗಿರತಕ್ಕದ್ದು.

**43. ಹಣಕಾಸು ಸಮಿತಿ.–** (1) ಮಂಡಳಿಯು ಈ ಮುಂದಿನ ಸದಸ್ಯರುಗಳನ್ನೊಳಗೊಂಡ ಒಂದು ಹಣಕಾಸು ಸಮಿತಿಯನ್ನು ರಚಿಸತಕ್ಕದ್ದು ಎಂದರೆ :–

(i) ಕುಲಪತಿಯವರು – ಅಧ್ಯಕ್ಷರಾಗಿರತಕ್ಕದ್ದು;

(ii) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಣಕಾಸು ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iii) ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಅಥವಾ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅವರ ನಾಮನಿರ್ದೇಶಿತರು;

(iv) ಕುಲಪತಿಯವರು ನಾಮನಿರ್ದೇಶಿಸಿದ ವ್ಯವಸ್ಥಾಪನಾ ಮಂಡಳಿಯ ಒಬ್ಬ ಸದಸ್ಯರು;

(v) ಕುಲಸಚಿವರು;

(vi) ಲೆಕ್ಕ ನಿಯಂತ್ರಕರು – ಸದಸ್ಯ ಕಾರ್ಯದರ್ಶಿ.

(2) ಹಣಕಾಸು ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕಪತ್ರಗಳು ಮತ್ತು ಆಯವ್ಯಯ ಅಂದಾಜುಗಳನ್ನು ಪರೀಕ್ಷಿಸುವುದು ಮತ್ತು ಅದರ ಮೇಲೆ ಮಂಡಳಿಗೆ ಸಲಹೆಗಳನ್ನು ನೀಡುವುದು;

(ii) ವಿಶ್ವವಿದ್ಯಾಲಯದ ಹಣಕಾಸಿನ ಪರಿಸ್ಥಿತಿಯನ್ನು ಕಾಲಕಾಲಕ್ಕೆ ಪರಿವೀಕ್ಷಿಸುವುದು;

(iii) ವಿಶ್ವವಿದ್ಯಾಲಯದ ಹಣಕಾಸಿಗೆ ಸಂಬಂಧಿಸಿದ ಎಲ್ಲ ವಿಷಯಗಳ ಮೇಲೆ ಮಂಡಳಿಗೆ ಶಿಫಾರಸ್ಸುಗಳನ್ನು ಮಾಡುವುದು;

(iv) ಮಂಡಳಿಗೆ ಕಟ್ಟುನಿಟ್ಟಾದ ಆರ್ಥಿಕ ಮಿತವ್ಯಯವನ್ನು ಅನುಸರಿಸಲು ಕಠಿಣ ಕ್ರಮಗಳನ್ನು ಅಳವಡಿಸಿಕೊಳ್ಳಲು ಶಿಫಾರಸ್ಸುಗಳನ್ನು ಮಾಡುವುದು ಮತ್ತು ಅನಗತ್ಯ ವೆಚ್ಚಗಳನ್ನು ಕಡಿತಗೊಳಿಸಲು ಸಲಹೆಗಳನ್ನು ನೀಡುವುದು;

(v) ವಿಶ್ವವಿದ್ಯಾಲಯದ ಹಣ ಬಲವನ್ನು ಉತ್ತಮಗೊಳಿಸಲು ಸಂಶೋಧನೆ ಮತ್ತು ಬೋಧನೆಗಳೆರಡರಲ್ಲೂ ವೆಚ್ಚ ವಸೂಲಿ ವಿಧಾನಗಳ ಬಗ್ಗೆ ಮಂಡಳಿಗೆ ಸೂಕ್ತ ಶಿಫಾರಸ್ಸುಗಳನ್ನು ಮಾಡುವುದು.

## ಅಧ್ಯಾಯ – VII

### ಕಾಲೇಜುಗಳ ಸಂಯೋಜನೆ ಮತ್ತು ಸಂಸ್ಥೆಗಳಿಗೆ ಮನ್ನಣೆ

**44. ಕಾಲೇಜುಗಳ ಸಂಯೋಜನೆ.**–(1) ವಿಶ್ವವಿದ್ಯಾಲಯದ ಪ್ರದೇಶದಲ್ಲಿರುವ ಕಾಲೇಜುಗಳನ್ನು ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳನ್ನು ಪೂರೈಸಿದ ತರುವಾಯ ರಾಜ್ಯ ಸರ್ಕಾರವು ಮಾಡಿದ ಶಿಫಾರಸ್ಸುಗಳ ಮೇಲೆ ವಿಶ್ವವಿದ್ಯಾಲಯದ ಸಂಯೋಜಿತ ಕಾಲೇಜುಗಳಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜಿಸತಕ್ಕದ್ದು.

(2) ಕುಲಸಚಿವರು, ಹೊಸ ಕಾಲೇಜುಗಳ ಸಂಯೋಜನೆಯ ಬಗ್ಗೆ, ಅಸ್ತಿತ್ವದಲ್ಲಿರುವ ಸಂಯೋಜಿತ ಕಾಲೇಜುಗಳಲ್ಲಿ ಹೊಸ ವ್ಯಾಸಂಗ ಕ್ರಮಗಳ ಬಗ್ಗೆ, ಸಂಯೋಜಿತ ಕಾಲೇಜುಗಳಲ್ಲಿ ಹೊಸ ವಿಷಯಗಳು ಮತ್ತು ಮಂಜೂರಾದ ಪ್ರವೇಶ ಅವಕಾಶದಲ್ಲಿನ ಬದಲಾವಣೆಯ ಬಗ್ಗೆ ಅರ್ಜಿಗಳನ್ನು ಆಹ್ವಾನಿಸಿ, ಅರ್ಜಿಗಳ ಸ್ವೀಕೃತಿಗೆ ಕೊನೆಯ ದಿನಾಂಕವನ್ನು ನಿಗದಿಪಡಿಸಿ, ಒಂದು ಇಂಗ್ಲಿಷ್ ವೃತ್ತ ಪತ್ರಿಕೆ ಮತ್ತು ಒಂದು ಕನ್ನಡ ವೃತ್ತ ಪತ್ರಿಕೆ ಹೀಗೆ ಕಡೆಯ ಪಕ್ಷ ಎರಡು ಪ್ರಮುಖ ವೃತ್ತ ಪತ್ರಿಕೆಗಳಲ್ಲಿ ಅಧಿಸೂಚಿಸತಕ್ಕದ್ದು. ಈ ಜಾಹಿರಾತು, ವಿಶ್ವವಿದ್ಯಾಲಯವು ಅಗತ್ಯ ಪಡಿಸಬಹುದಾದಂತಹ ಇತರ ವಿವರಗಳನ್ನು ಒಳಗೊಂಡಿರತಕ್ಕದ್ದು ಮತ್ತು ಕಾಲೇಜುಗಳು ಭಾರತದ ಕೃಷಿ ಸಂಶೋಧನಾ ಪರಿಷತ್ತು ಅಥವಾ ಅಂತಹ ಇತರ ಪ್ರಾಧಿಕಾರಗಳ ಅನುಮೋದನೆ ಅಥವಾ ಮನ್ನಣೆಯನ್ನು ಪಡೆಯಬೇಕೆಂಬುದನ್ನು ಅಗತ್ಯಪಡಿಸಿದಲ್ಲಿ, ಆ ಬಗ್ಗೆ ನಿರ್ದಿಷ್ಟ ಸೂಚನೆ ನೀಡತಕ್ಕದು ಮತ್ತು ಸಂಯೋಜನೆಗಾಗಿ ಸಲ್ಲಿಸಬೇಕಾದ ಶುಲ್ಕದ ಮೊಬಲಗನ್ನು ಸಹ ನಿರ್ದಿಷ್ಟಪಡಿಸತಕ್ಕದ್ದು.

(3) ವಿಶ್ವವಿದ್ಯಾಲಯಕ್ಕೆ ಸಂಯೋಜನೆಗಾಗಿ ಅರ್ಜಿಸಲ್ಲಿಸುವ ಕಾಲೇಜು, ಈ ಮುಂದಿನವುಗಳಿಗೆ ಸಂಬಂಧಪಟ್ಟಂತೆ ಮಾಹಿತಿಯನ್ನು ಒದಗಿಸಿ ಜಾಹಿರಾತಿನಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಅರ್ಜಿಯನ್ನು ಕುಲಸಚಿವರಿಗೆ ಕಳುಹಿಸತಕ್ಕದ್ದು, ಎಂದರೆ:–

(i) ಆ ಕಾಲೇಜು ಒದಗಿಸಲು ಉದ್ದೇಶಿಸಿದ ಶಿಕ್ಷಣದ ಮಾದರಿಯನ್ನು ನೆರೆಹೊರೆಯಲ್ಲಿರುವ ಇತರ ಕಾಲೇಜುಗಳು ಅದೇ ಮಾದರಿಯ ಶಿಕ್ಷಣಕ್ಕೆ ಮಾಡಿರುವ ಪ್ರಸ್ತುತ ಏರ್ಪಾಟನ್ನು ಮತ್ತು ಕಾಲೇಜನ್ನು ಯಾವ ಸ್ಥಳದಲ್ಲಿ ಸ್ಥಾಪಿಸಬೇಕಾಗಿದೆಯೋ ಆ ಸ್ಥಳದ ಸೂಕ್ತತೆಯನ್ನೂ ಗಮನದಲ್ಲಿಟ್ಟುಕೊಂಡು, ಆ ಕಾಲೇಜು ಸ್ಥಳೀಯ ಅವಶ್ಯಕತೆಯನ್ನು ಪೂರೈಸುತ್ತದೆ;

(ii) ಅದು ಕ್ರಮಬದ್ಧವಾಗಿ ರಚಿಸಲಾದ ಆಡಳಿತ ಮಂಡಳಿಯ ಆಡಳಿತ ನಿರ್ವಹಣೆಗೆ ಒಳಪಟ್ಟಿದೆ;

(iii) ಬೋಧಕ ಸಿಬ್ಬಂದಿಯ ಸಂಖ್ಯೆ ಮತ್ತು ಅರ್ಹತೆಗಳು ಮತ್ತು ಅವರ ಪದಾವಧಿಯನ್ನು ನಿಯಂತ್ರಿಸುವ ಷರತ್ತುಗಳು ಆ ಕಾಲೇಜಿನಲ್ಲಿ ಕೈಗೊಳ್ಳಬೇಕಾದ ಶಿಕ್ಷಣ, ಬೋಧನೆ ಅಥವಾ ತರಬೇತಿಗಳ ವ್ಯಾಸಂಗ ಕ್ರಮಗಳಿಗೆ ತಕ್ಕ ಏರ್ಪಾಟನ್ನು ಮಾಡುವಂಥದ್ದಾಗಿದೆ;

(iv) ಕಾಲೇಜನ್ನು ನಡೆಸುವಂಥ ಕಟ್ಟಡಗಳು ಸೂಕ್ತವಾಗಿವೆ ಮತ್ತು ತಂದೆ ತಾಯಿಗಳ ಅಥವಾ ಪಾಲಕರ ಜೊತೆಯಲ್ಲಿ ವಾಸವಾಗಿರದೆ ಇರುವ ವಿದ್ಯಾರ್ಥಿಗಳಿಗಾಗಿ ಆ ಕಾಲೇಜಿನಲ್ಲಿ ಅಥವಾ ಆ ಕಾಲೇಜು ಅನುಮೋದಿಸಿದ ವಸತಿಗಳಲ್ಲಿ ನಿವಾಸಕ್ಕಾಗಿ ಹಾಗೂ ಮೇಲ್ವಿಚಾರಣೆ ಮತ್ತು ಕ್ಷೇಮಾಭಿವೃದ್ಧಿಗಾಗಿ, ಶಾಸನಗಳು ಮತ್ತು ವಿನಿಯಮಗಳಿಗೆ ಅನುಗುಣವಾಗಿ ಏರ್ಪಾಟು ಮಾಡಲಾಗುವುದು;

(v) ಗ್ರಂಥಾಲಯಕ್ಕೆ ಹಾಗೂ ಇತರ ಸೇವಾ ಕೇಂದ್ರಗಳಿಗೆ ಸೂಕ್ತ ವ್ಯವಸ್ಥೆ ಮಾಡಲಾಗಿದೆ;

(vi) ಪ್ರಾಯೋಗಿಕ ವಿಜ್ಞಾನದ ಯಾವುದೇ ಶಾಖೆಯಲ್ಲಿ ಸಂಯೋಜನೆಯನ್ನು ಕೋರಿರುವಲ್ಲಿ, ಶಾಸನಗಳು ಮತ್ತು ವಿನಿಯಮಗಳಿಗೆ ಅನುಗುಣವಾಗಿ ಆ ವಿಜ್ಞಾನದ ಶಾಖೆಯಲ್ಲಿ ಶಿಕ್ಷಣ ಕೊಡುವುದಕ್ಕಾಗಿ ಸರಿಯಾದ ರೀತಿಯಲ್ಲಿ ಸಜ್ಜುಗೊಳಿಸಿದ ಪ್ರಯೋಗಶಾಲೆ ಅಥವಾ ವಸ್ತು ಸಂಗ್ರಹಾಲಯ, ಪ್ರಯೋಗಿಕ ಕ್ಷೇತ್ರಗಳ ವ್ಯವಸ್ಥೆಗಳನ್ನು ನಿರ್ದಿಷ್ಟಪಡಿಸಿದ ಅವಧಿಯೊಳಗೆ ಮಾಡಲಾಗಿದೆ ಅಥವಾ ಮಾಡಲಾಗುವುದು;

(vii) ಸನ್ನಿವೇಶಗಳಲ್ಲಿ ಅವಕಾಶವಿರುವಷ್ಟರ ಮಟ್ಟಿಗೆ ಕಾಲೇಜಿನ ಪರಿಮಿತಿಯಲ್ಲಿ ಅಥವಾ ಅದರ ಹತ್ತಿರ ಅಥವಾ ವಿದ್ಯಾರ್ಥಿಗಳ ನಿವಾಸಕ್ಕಾಗಿ ಒದಗಿಸಿರುವ ಸ್ಥಳದಲ್ಲಿ ಪ್ರಾಂಶುಪಾಲರ ಮತ್ತು ಬೋಧಕ ಸಿಬ್ಬಂದಿಯ ಸದಸ್ಯರ ವಸತಿಗಾಗಿ ಸೂಕ್ತ ಏರ್ಪಾಟು ಮಾಡಲಾಗುವುದು;

(viii) ಕಾಲೇಜಿನ ನಿರಂತರ ನಿರ್ವಹಣೆ ಮತ್ತು ದಕ್ಷ ಕಾರ್ಯ ನಿರ್ವಹಣೆಗಾಗಿ ತಕ್ಕ ಏರ್ಪಾಟು ಮಾಡುವಷ್ಟು ಕಾಲೇಜಿನ ಹಣಕಾಸು ಸಂಪನ್ಮೂಲಗಳಿವೆ; ಮತ್ತು

(ix) ವಿದ್ಯಾರ್ಥಿಗಳು ಸಂದಾಯ ಮಾಡಬೇಕಾದ ಫೀಜು ಏನಾದರೂ ಇದ್ದರೆ ಅದನ್ನು ನಿಗದಿಮಾಡುವ ನಿಯಮಗಳನ್ನು ರಚಿಸಲಾಗಿದೆ.

(4) ಹೊಸ ಕಾಲೇಜುಗಳಿಗೆ ಸಂಯೋಜನೆಯ ಅರ್ಜಿಗಳನ್ನು ವ್ಯಕ್ತಿಗಳಿಂದ ಅಂಗೀಕರಿಸತಕ್ಕದ್ದಲ್ಲ, ರಾಜ್ಯ ಸರ್ಕಾರದ ನೆರವು ಇಲ್ಲದೆಯೇ ಕಾಲೇಜುಗಳನ್ನು ನಡೆಸಲು ಸಾಧ್ಯವಾಗುವ ಹಣಕಾಸು ಚೈತನ್ಯ ಹೊಂದಿರುವ, ನೋಂದಾಯಿತ ಸಂಘ ಅಥವಾ ನೋಂದಾಯಿತ ಸಾರ್ವಜನಿಕ ಟ್ರಸ್ಟ್‌ಗಳಿಂದ ಮಾತ್ರವೇ ಅಂಗೀಕರಿಸತಕ್ಕದ್ದು.

(5) ಅರ್ಜಿಯ ಜೊತೆಗೆ, ಕಾಲೇಜನ್ನು ಸಂಯೋಜಿಸಿದ ನಂತರ ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾಲಯದ ಪೂರ್ವಾನುಮೋದನೆ ಇಲ್ಲದೆ ವ್ಯವಸ್ಥಾಪನೆಯನ್ನು ವರ್ಗಾವಣೆ ಮಾಡುವುದಿಲ್ಲ ಅಥವಾ ಕಾಲೇಜಿನ ಹೆಸರು ಮತ್ತು ಅಭಿನಾಮವನ್ನು ಬದಲಾವಣೆ ಮಾಡುವುದಿಲ್ಲವೆಂಬ ಒಂದು ಮುಚ್ಚಳಿಕೆಯು ಇರತಕ್ಕದ್ದು.

(6) (2)ನೇ ಉಪಪ್ರಕರಣದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಅದನ್ನು ಪರಿಶೀಲನೆಗಾಗಿ ಮಂಡಳಿಯ ಮುಂದೆ ಇಡತಕ್ಕದ್ದು. ಮಂಡಳಿಯು ಸಂಯೋಜನೆಯ ಪ್ರತಿಯೊಂದು ಅರ್ಜಿಯನ್ನು ಪರಿಶೀಲಿಸಿದ ತರುವಾಯ ಒಂದು ಸ್ಥಳೀಯ ವಿಚಾರಣಾ ಸಮಿತಿಯಿಂದ ಸ್ಥಳೀಯ ವಿಚಾರಣೆ ಮಾಡಬೇಕೆಂದು ನಿರ್ದೇಶನ ನೀಡತಕ್ಕದ್ದು.

(7) ಸ್ಥಳೀಯ ವಿಚಾರಣಾ ಸಮಿತಿಯು, ಅದನ್ನು ರಚಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ, ಒಂದು ವರದಿಯನ್ನು ವಿದ್ಯಾ ವಿಷಯಕ ಪರಿಷತ್ತಿಗೆ ಸಲ್ಲಿಸತಕ್ಕದ್ದು.

(8) ವಿದ್ಯಾ ವಿಷಯಕ ಪರಿಷತ್ತು, ಸ್ಥಳೀಯ ವಿಚಾರಣಾ ಸಮಿತಿಯ ವರದಿಯನ್ನು ಸ್ವೀಕರಿಸಿದ ತರುವಾಯ ಕೂಡಲೇ ವರದಿಯಲ್ಲಿ ವಿವರಿಸಿದ ಸಮಿತಿಯ ತೀರ್ಮಾನಗಳನ್ನು ಪರಿಗಣಿಸತಕ್ಕದ್ದು ಮತ್ತು ತನಗೆ ಅವಶ್ಯಕವೆಂದು ಕಂಡುಬರಬಹುದಾದಂಥ ಹೆಚ್ಚಿನ ವಿಚಾರಣೆಯನ್ನು ಮಾಡತಕ್ಕದ್ದು ಮತ್ತು ಅಂಥ ಮನವಿಯ ಮೇಲೆ ತನ್ನ ಅಭಿಪ್ರಾಯವನ್ನು ದಾಖಲು ಮಾಡತಕ್ಕದ್ದು ಮತ್ತು ಅದನ್ನು ಮಂಡಳಿಗೆ ಕಳುಹಿಸತಕ್ಕದ್ದು.

(9) ಮಂಡಳಿಯು, ಸಮಿತಿಯ ವರದಿಯನ್ನು ಮತ್ತು ವಿದ್ಯಾ ವಿಷಯಕ ಪರಿಷತ್ತಿನ ಗೊತ್ತುವಳಿಯನ್ನು ಪರಿಗಣಿಸತಕ್ಕದ್ದು ಹಾಗೂ ತಾನು ಅವಶ್ಯವೆಂದು ಭಾವಿಸಬಹುದಾದಂತಹ ಹೆಚ್ಚಿನ ವಿಚಾರಣೆಯನ್ನು ಮಾಡಿದ ತರುವಾಯ ಮನವಿಯನ್ನು ಪೂರ್ಣವಾಗಿ ಅಥವಾ ಭಾಗಶ: ಮಂಜೂರುಮಾಡಬೇಕೆ ಅಥವಾ ನಿರಾಕರಿಸಬೇಕೆ ಎಂಬ ಪ್ರಶ್ನೆಯ ಬಗ್ಗೆ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು.

(10) ಕುಲಸಚಿವರು ಅರ್ಜಿಯನ್ನು ಅದರ ಅಡಕವನ್ನು, ಅನುಬಂಧಗಳನ್ನು ಸ್ಥಳೀಯ ವಿಚಾರಣಾ ಸಮಿತಿಯ ವರದಿ ಮತ್ತು ವಿದ್ಯಾ ವಿಷಯಕ ಪರಿಷತ್ತಿನ ಹಾಗೂ ಮಂಡಳಿಯ ಎಲ್ಲಾ ನಡವಳಿಗಳನ್ನು ಮುಂಬರುವ ವರ್ಷದ ಮಾರ್ಚ್ ಮೂವತ್ತೊಂದಕ್ಕೆ ಮೊದಲು ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(11) ರಾಜ್ಯ ಸರ್ಕಾರವು, ಸ್ಥಳಿಯ ವಿಚಾರಣಾ ಸಮಿತಿಯ, ವಿದ್ಯಾ ವಿಷಯಕ ಪರಿಷತ್ತಿನ ಮತ್ತು ಮಂಡಳಿಯ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸತಕ್ಕದ್ದು ಮತ್ತು ಅವಶ್ಯಕವೆಂದು ಅದಕ್ಕೆ ಕಂಡುಬರಬಹುದಾದಂತಹ ವಿಚಾರಣೆಯ ತರುವಾಯ ಪ್ರವೇಶಾವಕಾಶದಲ್ಲಿ ವ್ಯತ್ಯಾಸಗಳು ಸೇರಿದಂತೆ, ಸಂದರ್ಭಾನುಸಾರ ಸಂಯೋಜಿಸಲು ಅಥವಾ ಸಂಯೋಜನೆಯನ್ನು ಅಥವಾ ಅದರ ಯಾವುದೇ ಭಾಗವನ್ನು ನಿರಾಕರಿಸಲು ವಿಶ್ವವಿದ್ಯಾಲಯಕ್ಕೆ ತನ್ನ ಶಿಫಾರಸ್ಸನ್ನು ಮಾಡತಕ್ಕದ್ದು.

(12) ವಿಶ್ವವಿದ್ಯಾಲಯವು ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದರಂತೆ ಔಪಚಾರಿಕ ಆದೇಶಗಳನ್ನು ಹೊರಡಿಸತಕ್ಕದ್ದು.

(13) ಆದಾಗ್ಯೂ ಸಂಯೋಜನೆಯ ಮಂಜೂರಾತಿಯು ಭಾರತೀಯ ಕೃಷಿ ಸಂಶೋಧನಾ ಪರಿಷತ್ತು ಅಥವಾ ಸಂಬಂಧಪಟ್ಟಂತಹ ಇತರ ಪ್ರಾಧಿಕಾರಗಳು ಅಥವಾ ನಿಕಾಯಗಳ ಪೂರ್ವಾನುಮೋದನೆ ಪಡೆಯುವುದಕ್ಕೆ ಒಳಪಟ್ಟಿರತಕ್ಕದ್ದು ಮತ್ತು ನಿರ್ಧರಿಸಲಾದ ಪ್ರವೇಶಾವಕಾಶದ ಸಂಖ್ಯೆಯು, ಅಂತಹ ಪ್ರಾಧಿಕಾರಗಳು ಅಥವಾ ನಿಕಾಯಗಳು ಆ ಸಂಖ್ಯೆಯನ್ನು ನಿರ್ದಿಷ್ಟಪಡಿಸಿದ್ದರೆ ಅದನ್ನು ಮೀರತಕ್ಕದ್ದಲ್ಲ.

(14) ಸಂಯೋಜನೆಗಾಗಿ ಅಥವಾ ಪ್ರವೇಶಾವಕಾಶದ ಸಂಖ್ಯೆಯನ್ನು ನಿಗದಿಪಡಿಸುವುದಕ್ಕಾಗಿ ಅಥವಾ ಅದರ ಯಾವುದೇ ಭಾಗಕ್ಕಾಗಿ, ಅರ್ಜಿಯನ್ನು ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ವಿಶ್ವವಿದ್ಯಾಲಯವು ಮಂಜೂರು ಮಾಡಿದ್ದರೆ, ವಿಶ್ವವಿದ್ಯಾಲಯವು, ನಿರ್ದಿಷ್ಟ ಷರತ್ತುಗಳೊಡನೆ ಅಥವಾ ಷರತ್ತುಗಳಿಲ್ಲದೆ ನಿರ್ದಿಷ್ಟ ಪ್ರವೇಶಾವಕಾಶದ ಸಂಖ್ಯೆಯೊಡನೆ ಯಾವ ವ್ಯಾಸಂಗಕ್ರಮಗಳ ಸಂಬಂಧದಲ್ಲಿ ಮತ್ತು ಯಾವ ಅವಧಿಗಾಗಿ, ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಸಂಯೋಜಿಸಲಾಗಿದೆಯೋ, ಆ ವ್ಯಾಸಂಗಕ್ರಮಗಳನ್ನು ಮತ್ತು ಅವಧಿಯನ್ನು ಆದೇಶದಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

(15) ಅಂತಹ ಅರ್ಜಿಯನ್ನು ಅಥವಾ ಅದರ ಯಾವುದೇ ಭಾಗವನ್ನು ರಾಜ್ಯ ಸರ್ಕಾರವು ಅಥವಾ ವಿಶ್ವವಿದ್ಯಾಲಯವು ನಿರಾಕರಿಸಿದ್ದರೆ, ಹಾಗೆ ನಿರಾಕರಿಸಲು ಕಾರಣಗಳನ್ನು ತಿಳಿಸತಕ್ಕದ್ದು.

(16) (1)ನೇ ಉಪಪ್ರಕರಣದ ಅಡಿಯಲ್ಲಿ ಸಲ್ಲಿಸಿದ ಯಾವುದೇ ಅರ್ಜಿಯನ್ನು (12)ನೇ ಉಪ ಪ್ರಕರಣದ ಅಡಿಯಲ್ಲಿ ಆದೇಶವನ್ನು ಮಾಡುವುದಕ್ಕೆ ಮೊದಲು ಯಾವುದೇ ಸಮಯದಲ್ಲಿ ಅರ್ಜಿದಾರನು ಹಿಂದಕ್ಕೆ ಪಡೆಯಬಹುದು.

(17) ಪ್ರತಿಯೊಂದು ಶೈಕ್ಷಣಿಕ ವರ್ಷಕ್ಕಾಗಿ, ಪ್ರಸಕ್ತ ಇರುವ ವ್ಯಾಸಂಗ ಕ್ರಮಗಳಿಗಾಗಿ ಮತ್ತು ಹೊಸ ವ್ಯಾಸಂಗ ಕ್ರಮಗಳನ್ನು ಹೊರತುಪಡಿಸಿ ಅನುಸರಣಾ ವ್ಯಾಸಂಗ ಕ್ರಮಗಳಿಗೆ ಸಂಯೋಜನೆಯನ್ನು ನವೀಕರಿಸುವುದಕ್ಕಾಗಿ ಅಥವಾ ಮುಂದುವರೆಸುವುದಕ್ಕಾಗಿ ಮಂಜೂರಾತಿಯನ್ನು ಮಂಡಳಿಯು ಹೊಸ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗುವ ರೀತಿಯಲ್ಲಿಯೇ, ವಿದ್ಯಾ ವಿಷಯಕ ಪರಿಷತ್ತಿನೊಡನೆ ಸಮಾಲೋಚಿಸಿ ನೀಡಬಹುದು.

(18) ರಾಜ್ಯ ಸರ್ಕಾರವು ಪ್ರತಿಯೊಂದು ವ್ಯಾಸಂಗ ಕ್ರಮದ ಸಂಬಂಧದಲ್ಲಿ ಪ್ರವೇಶಾವಕಾಶವನ್ನು ವಾರ್ಷಿಕ ಆಧಾರದಲ್ಲಿ ನಿರ್ಧರಿಸತಕ್ಕದ್ದು.

**45. ಹೊಸ ಕಾಲೇಜಿನಲ್ಲಿ ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಕೊಳ್ಳುವುದಕ್ಕೆ ನಿರ್ಬಂಧ.–** (1) ಯಾವುದೇ ವಿಶ್ವವಿದ್ಯಾಲಯಕ್ಕೆ ಸಂಯೋಜನೆಯನ್ನು ಕೋರುತ್ತಿರುವ ಒಂದು ಹೊಸ ಕಾಲೇಜು ಹೊಸ ವ್ಯಾಸಂಗ ಕ್ರಮಕ್ಕೆ ಸಂಯೋಜನೆಯನ್ನು ಕೋರುತ್ತಿರುವ ಅಥವಾ ನಿರ್ದಿಷ್ಟಪಡಿಸಲಾದಂಥ ಪ್ರವೇಶಾವಕಾಶಕ್ಕಿಂತಲೂ ಹೆಚ್ಚು ಪ್ರವೇಶಾವಕಾಶವನ್ನು ಕೋರುತ್ತಿರುವ ಈಗಾಗಲೇ ಇರುವ ಒಂದು ಕಾಲೇಜು ಸಂದರ್ಭಾನುಸಾರ ಆ ಹೊಸ ಕಾಲೇಜಿಗೆ ಸಂಯೋಜನೆಯನ್ನು ಅಥವಾ ಈಗಾಗಲೇ ಇರುವ ಸಂಯೋಜಿತ ಕಾಲೇಜಿನಲ್ಲಿ ಒಂದು ಹೊಸ ವ್ಯಾಸಂಗ ಕ್ರಮವನ್ನು ಅಥವಾ ಅಂಥ ಒಂದು ವ್ಯಾಸಂಗ ಕ್ರಮದ ಸಂಬಂಧದಲ್ಲಿ ನಿರ್ದಿಷ್ಟಪಡಿಸಿದ ಪ್ರವೇಶಾವಕಾಶವನ್ನು ಬದಲಾಯಿಸಲು ವಿಶ್ವ ವಿದ್ಯಾಲಯವು ಮಂಜೂರಾತಿ ನೀಡಿದ್ದ ಹೊರತು ಅವುಗಳು ಆ ಸಂಬಂಧದಲ್ಲಿ ವಿದ್ಯಾರ್ಥಿಗಳನ್ನು ಪ್ರವೇಶ ಮಾಡಿಸಿಕೊಳ್ಳತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಉಪಬಂಧವನ್ನು ಉಲ್ಲಂಘಿಸುವ ಯಾವುದೇ ಸಂಸ್ಥೆಯು ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜನೆ ಹೊಂದಿರದ ವಿದ್ಯಾ ಸಂಸ್ಥೆಗಳಿಗೆ ಪ್ರವೇಶ ನಿಷೇಧ ಅಧಿನಿಯಮ, 1992ರ (1993ರ ಕರ್ನಾಟಕ ಅಧಿನಿಯಮ 7) ಅಡಿಯಲ್ಲಿ ಕೈಗೊಳ್ಳುವ ಕ್ರಮಕ್ಕೆ ಗುರಿಯಾಗತಕ್ಕದ್ದು.

**46. ಪರೀಕ್ಷೆಗಳಿಗೆ ಹಾಜರಾಗಲು ನಿರ್ಬಂಧ.–** ತನ್ನ ಪ್ರವೇಶವು ಅಮಾನ್ಯವಾಗಿರುವ ಅಥವಾ ವಿಶ್ವವಿದ್ಯಾಲಯದಿಂದ ತನ್ನ ಪ್ರವೇಶವು ಅನುಮೋದಿತವಾಗಿಲ್ಲದ ಅಥವಾ ನಿರ್ದಿಷ್ಟಪಡಿಸಲಾದ ವಿದ್ಯಾರ್ಥಿಗಳ ಸಂಖ್ಯೆಗಿಂತ ಹೆಚ್ಚಿಗೆಯಾಗಿ ಕಾಲೇಜಿಗೆ ಅಥವಾ ವ್ಯಾಸಂಗ ಕ್ರಮಕ್ಕೆ ಪ್ರವೇಶಪಡೆದಿರುವ ಯಾವೊಬ್ಬ ವಿದ್ಯಾರ್ಥಿಯು, ಕಾಲೇಜು ಅಥವಾ ವಿಶ್ವವಿದ್ಯಾಲಯವು ನಡೆಸುವ ಪರೀಕ್ಷೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ.

**47. ಖಾಯಂ ಸಂಯೋಜನೆ.–** (1) ಐದು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಗೆ ನಿರಂತರವಾಗಿ ಸಂಯೋಜನೆಗೊಂಡಿರುವ ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿರ್ದಿಷ್ಟಪಡಿಸಿದ ಸಂಯೋಜನೆಯ ಎಲ್ಲಾ ಷರತ್ತುಗಳನ್ನು ಪೂರೈಸಿರುವ ಮತ್ತು ವಿದ್ಯಾ ವಿಷಯದಲ್ಲಿ ಉತ್ಕೃಷ್ಟತೆಯನ್ನು ಸಾಧಿಸಿದ ಹಾಗೂ ಆಡಳಿತಾತ್ಮಕ ಗುಣಮಟ್ಟಗಳನ್ನು ಹೊಂದಿರುವ ಕಾಲೇಜು ಖಾಯಂ ಸಂಯೋಜನೆಯ ಮಂಜೂರಾತಿಗೆ ಅರ್ಹವಾಗಿರತಕ್ಕದ್ದು.

(2) 45ನೇ ಪ್ರಕರಣದ ಉಪಬಂಧಗಳು, ಯಥೋಚಿತ ವ್ಯತ್ಯಾಸಗಳೊಂದಿಗೆ ಖಾಯಂ ಸಂಯೋಜನೆಯ ಮಂಜೂರಾತಿಗೆ ಅನ್ವಯವಾಗತಕ್ಕದ್ದು.

(3) ಖಾಯಂ ಆಗಿ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ, ಆಡಳಿತಾತ್ಮಕ ಮತ್ತು ಶೈಕ್ಷಣಿಕ ಕಾರ್ಯ ವೈಖರಿಯನ್ನು ಐದು ವರ್ಷಗಳ ಅವಧಿಯಲ್ಲಿ ಕೊನೆಪಕ್ಷ ಒಂದು ಸಲದಂತೆ ಆಗಾಗ್ಗೆ, ವಿಶ್ವವಿದ್ಯಾಲಯ ಮತ್ತು ರಾಜ್ಯ ಸರ್ಕಾರಗಳು ಪರಿಶೀಲನೆ ಮಾಡತಕ್ಕದ್ದು.

(4) ಪೂರ್ವೋಕ್ತ ಉಪ ಪ್ರಕರಣಗಳಲ್ಲಿ ಏನೇ ಇದ್ದರೂ, ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜು, (1)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಷರತ್ತುಗಳನ್ನು ಪೂರೈಸಲು ವಿಫಲವಾಗಿದ್ದಲ್ಲಿ, ಅದರ ಖಾಯಂ ಸಂಯೋಜನೆಯನ್ನು ರದ್ದುಪಡಿಸತಕ್ಕದ್ದು:

ಪರಂತು, ಸಂಬಂಧಪಟ್ಟ ಕಾಲೇಜಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ವಿಶ್ವವಿದ್ಯಾಲಯವು ಒಂದು ಅವಕಾಶಕೊಟ್ಟ ಹೊರತು ಖಾಯಂ ಸಂಯೋಜನೆಯನ್ನು ರದ್ದುಗೊಳಿಸತಕ್ಕದ್ದಲ್ಲ:

ಮತ್ತು ಪರಂತು, ಖಾಯಂ ಸಂಯೋಜನೆಯನ್ನು ರದ್ದುಗೊಳಿಸಿದ ತರುವಾಯ ಸಂಬಂಧಪಟ್ಟ ಕಾಲೇಜು, ಸಂಯೋಜನೆಯನ್ನು ವಾರ್ಷಿಕ ಆಧಾರದ ಮೇಲೆ ತಾತ್ಕಾಲಿಕವಾಗಿ ಮುಂದುವರೆಸಲು ಕೋರತಕ್ಕದ್ದು.

**48. ಸಂಯೋಜನೆಯನ್ನು ಹಿಂತೆಗೆದುಕೊಳ್ಳುವುದು.–** (1) ಸಂಯೋಜನೆಗೊಂಡ ಕಾಲೇಜು ಈ ಅಧ್ಯಾದೇಶದ ಯಾವುದೇ ಉಪಬಂಧವನ್ನು ಪಾಲಿಸಲು ವಿಫಲವಾದರೆ ಅಥವಾ ಸಂಯೋಜನೆಯ ಯಾವುದೇ ಷರತ್ತುಗಳನ್ನು ಪಾಲಿಸಲು ವಿಫಲವಾದರೆ ಅಥವಾ ಕಾಲೇಜನ್ನು ಶಿಕ್ಷಣದ ಹಿತಾಸಕ್ತಿಗಳಿಗೆ ದಕ್ಕೆ ಉಂಟು ಮಾಡುವ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದರೆ, ಸಂಯೋಜನೆಯ ಮೂಲಕ ಕಾಲೇಜಿಗೆ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಪ್ರದತ್ತವಾದ ಹಕ್ಕುಗಳನ್ನು ಪೂರ್ಣವಾಗಿ ಅಥವಾ ಭಾಗಶ: ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಡು ಮಾಡಬಹುದು.

(2) ಅಂತಹ ಹಕ್ಕುಗಳನ್ನು ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಮಾರ್ಪಾಟುಮಾಡುವುದಕ್ಕೆ ಸೂಚನೆಯನ್ನು ಮಂಡಳಿಯ ಸಭೆಯಲ್ಲಿ ಮಾತ್ರ ಮಂಡಿಸತಕ್ಕದ್ದು. ಮಂಡಳಿಯ ಪದನಿಮಿತ್ತ ಸದಸ್ಯನೂ ಒಳಗೊಂಡಂತೆ ಅಂತಹ ಸೂಚನೆಯನ್ನು ಮಂಡಿಸಲು ಉದ್ದೇಶಿಸುವ ಯಾವೊಬ್ಬ ಸದಸ್ಯನು ಯಾವ ಕಾರಣದ ಮೇಲೆ ಅಂತಹ ಸೂಚನೆಯನ್ನು ಮಂಡಿಸಲಾಗಿದೆಯೋ ಆ ಕಾರಣಗಳನ್ನು ಲಿಖಿತದಲ್ಲಿ ನಿರೂಪಿಸಿ ಅಂಥ ಒಂದು ನೋಟೀಸನ್ನು ನೀಡತಕ್ಕದ್ದು.

(3) ಸದರಿ ಸೂಚನೆಯನ್ನು ಪರಿಗಣನೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ಮಂಡಳಿಯು, ನೋಟೀಸಿನ ಒಂದು ಪ್ರತಿಯನ್ನು, ತನ್ನ ತಿಳುವಳಿಕೆ ಪತ್ರದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಆ ಕಾಲೇಜು ಸದರಿ ಸೂಚನೆಯ ಬಗ್ಗೆ ತನ್ನ

ಯಾವುದೇ ಮನವಿಯನ್ನು ಬರೆದು ಸಲ್ಲಿಸತಕ್ಕದೆಂದು ಮತ್ತು ಅದನ್ನು ಮಂಡಳಿಯು ಪರ್ಯಾಲೋಚಿಸುವುದೆಂದು ನಿರ್ದಿಷ್ಟವಾಗಿ ತಿಳಿಸಿದ ಪತ್ರದೊಂದಿಗೆ ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಕಳುಹಿಸತಕ್ಕದ್ದು.

(4) (3)ನೇ ಉಪ ಪ್ರಕರಣದಲ್ಲಿ ಹಾಗೆ ನಿರ್ದಿಷ್ಟಪಡಿಸಿದ ಅವಧಿಯನ್ನು ಅವಶ್ಯವಿದ್ದಲ್ಲಿ, ಮಂಡಳಿಯು ಸಮಂಜಸ ಸಮಯದವರೆಗೆ ವಿಸ್ತರಿಸಬಹುದು.

(5) ಮನವಿಯನ್ನು ಸ್ವೀಕರಿಸಿದ ಮೇಲೆ ಅಥವಾ ಹಿಂದಿನ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಅವಧಿಯು ಮುಗಿದ ಮೇಲೆ, ಮಂಡಳಿಯು ಸೂಚನೆಯ ನೋಟೀಸನ್ನು, ಅದರಲ್ಲಿ ತಿಳಿಸಿದ ಕಾರಣಗಳನ್ನು ಮತ್ತು ಅದರ ಮೇಲೆ ಸಲ್ಲಿಸಿದ ಮನವಿಯನ್ನು ಪರ್ಯಾಲೋಚಿಸಿದ ತರುವಾಯ ಮತ್ತು ಈ ಸಂಬಂಧದಲ್ಲಿ ತಾನು ರಚಿಸಿದ ಮತ್ತು ಪ್ರಾಧಿಕಾರ ನೀಡಿದ ಒಂದು ಸಮಿತಿಯು ತನಗೆ ಅವಶ್ಯವೆಂದು ಕಂಡು ಬರಬಹುದಾದಂತಹ ಪರಿಶೀಲನೆಯನ್ನು ನಡೆಸಿದ ತರುವಾಯ ಮತ್ತು ಅಂತಹ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರುವಾಯ, ಒಂದು ನಿರ್ಣಯವನ್ನು ಅದಕ್ಕೆ ಕಾರಣಗಳನ್ನು ದಾಖಲಿಸಿ ಅಂಗೀಕರಿಸತಕ್ಕದ್ದು ಮತ್ತು ಅದನ್ನು ವಿದ್ಯಾವಿಷಯಕ ಪರಿಷತ್ತಿಗೆ ಕಳುಹಿಸಿಕೊಡತಕ್ಕದ್ದು.

(6) (5)ನೇ ಉಪ ಪ್ರಕರಣದ ಅಡಿಯಲ್ಲಿನ ಒಂದು ವರದಿಯನ್ನು ಸ್ವೀಕರಿಸಿದ ಮೇಲೆ, ವಿದ್ಯಾ ವಿಷಯಕ ಪರಿಷತ್ತು ಅದಕ್ಕೆ ಅವಶ್ಯವೆಂದು ಕಂಡುಬರಬಹುದಾದಂತಹ ಹೆಚ್ಚಿನ ವಿಚಾರಣೆ ಯಾವುದಾದರೂ ಇದ್ದರೆ ಅದನ್ನು ಮಾಡಿದ ತರವಾಯ, ಆ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ದಾಖಲಿಸತಕ್ಕದ್ದು ಮತ್ತು ಅದನ್ನು ಮಂಡಳಿಗೆ ವಾಪಸ್ಸು ಕಳುಹಿಸಿಕೊಡತಕ್ಕದ್ದು.

(7) ಮಂಡಳಿಯು, ವಿದ್ಯಾ ವಿಷಯಕ ಪರಿಷತ್ತಿನ ನಿರ್ಣಯವನ್ನು ಪರ್ಯಾಲೋಚಿಸಿದ ತರುವಾಯ ಸಂಯೋಜನೆಯನ್ನು ಹಿಂತೆಗೆದುಕೊಳ್ಳಬೇಕೆಂದು ಶಿಫಾರಸ್ಸು ಮಾಡಿದ ಅಂತಿಮ ನಿರ್ಣಯವನ್ನು ಅಂಗೀಕರಿಸತಕ್ಕದ್ದು. ಅಂತಹ ನಿರ್ಣಯಕ್ಕೆ ಮಂಡಳಿಯ ಸಭೆಯಲ್ಲಿ ಹಾಜರಿದ್ದ ಸದಸ್ಯರ ಮೂರನೇ ಎರಡರಷ್ಟು ಸದಸ್ಯರ ಬೆಂಬಲ ದೊರೆತ ಹೊರತು ನಿರ್ಣಯವು ಮಂಡಳಿಯಿಂದ ಅಂಗೀಕೃತವಾಗಿರುವುದಾಗಿ ಭಾವಿಸತಕ್ಕದ್ದಲ್ಲ.

(8) ಕುಲಸಚಿವರು ಪ್ರಸ್ತಾವವನ್ನು, ಸೂಚನೆಯ ನೋಟೀಸು, ಕಾಲೇಜಿನ ಉತ್ತರ, ಮಂಡಳಿಯ ಮತ್ತು ವಿದ್ಯಾ ವಿಷಯಕ ಪರಿಷತ್ತಿನ ನಿರ್ಣಯವೂ ಒಳಗೊಂಡಂತೆ ಎಲ್ಲಾ ದಸ್ತಾವೇಜುಗಳನ್ನು ತೀರ್ಮಾನ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

(9) ರಾಜ್ಯ ಸರ್ಕಾರವು ತನಗೆ ಅವಶ್ಯವೆಂದು ಕಂಡುಬರಬಹುದಾದಂತಹ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರವಾಯ, ಒಂದು ನಿರ್ದಿಷ್ಟ ಶೈಕ್ಷಣಿಕ ವರ್ಷದಿಂದ ಅನ್ವಯವಾಗುವಂತೆ, ಸಂಯೋಜನೆಯನ್ನು ಪೂರ್ತಿಯಾಗಿ ಅಥವಾ ಭಾಗಶ: ಹಿಂತೆಗೆದುಕೊಳ್ಳುವಂತೆ ಅಥವಾ ಮಾರ್ಪಾಟು ಮಾಡುವಂತೆ ಅಥವಾ ಪ್ರಸ್ತಾವವನ್ನು ತಿರಸ್ಕರಿಸುವಂತೆ ವಿಶ್ವವಿದ್ಯಾಲಯಕ್ಕೆ ನಿರ್ದೇಶಿಸಬಹುದು.

(10) ವಿಶ್ವವಿದ್ಯಾಲಯವು ಅಂತಹ ನಿರ್ದೇಶನವನ್ನು ಸ್ವೀಕರಿಸಿದ ಮೇಲೆ, ಅಂತಹ ನಿರ್ದೇಶನಕ್ಕೆ ಅನುಸಾರವಾಗಿ ಔಪಚಾರಿಕ ಆದೇಶವನ್ನು ಹೊರಡಿಸತಕ್ಕದ್ದು.

(11) ಸಂಯೋಜನೆಯನ್ನು ಪೂರ್ಣವಾಗಿ ಅಥವಾ ಭಾಗಶ: ಹಿಂತೆಗೆದುಕೊಂಡ ಕಾಲೇಜಿನ ವಿದ್ಯಾರ್ಥಿಗಳಿಗೆ, ನಿರ್ದಿಷ್ಟ ವ್ಯಾಸಂಗ ಕ್ರಮದ ಸಂಬಂಧದಲ್ಲಿ ಹಾಗೆ ಸ್ಥಳಾವಕಾಶ ಕಲ್ಪಿಸಬೇಕಾದಂತಹ ವಿದ್ಯಾರ್ಥಿಗಳ ಸಂಖ್ಯೆಯಷ್ಟರ ಮಟ್ಟಿಗೆ ಪ್ರವೇಶ ಸಂಖ್ಯೆಯನ್ನು ಹೆಚ್ಚಿಸುವ ಮೂಲಕ, ವಿಶ್ವವಿದ್ಯಾಲಯವು, ಹತ್ತಿರದಲ್ಲಿರುವ ಕಾಲೇಜಿನಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಸ್ಥಳಾವಕಾಶವನ್ನು ಕಲ್ಪಿಸುವ ವ್ಯವಸ್ಥೆ ಮಾಡತಕ್ಕದ್ದು. ಅಂತಹ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಸಂಯೋಜನೆಯನ್ನು ಹಿಂತೆಗೆದುಕೊಂಡ ಕಾಲೇಜಿನಿಂದ ವಿಶ್ವವಿದ್ಯಾಲಯವು ಅವರನ್ನು ವರ್ಗಾಯಿಸಿದ ಕಾಲೇಜಿಗೆ ವರ್ಗಾಯಿಸತಕ್ಕದ್ದು.

**49. ಕಾಲೇಜು ಅಥವಾ ವ್ಯಾಸಂಗ ಕ್ರಮವನ್ನು ಸ್ವಯಂ ಮುಚ್ಚುವಿಕೆ.–** (1) ತನ್ನ ಅಸಾಮರ್ಥ್ಯದ ಅಥವಾ ಹಣಕಾಸು ದೃಷ್ಟಿಯಿಂದ ಉರ್ಜಿತವಾಗದ ಕಾರಣದಿಂದ ಅಥವಾ ಆಡಳಿತ ವ್ಯವಸ್ಥೆಯ ಕುಸಿತದ ಕಾರಣದಿಂದ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚಲು ಉದ್ದೇಶಿಸಿರುವಂತಹ ಯಾವುದೇ ಕಾಲೇಜಿನ ಆಡಳಿತ ಮಂಡಳಿಯು ವಿಶ್ವವಿದ್ಯಾಲಯಕ್ಕೆ ಮತ್ತು ರಾಜ್ಯ ಸರ್ಕಾರಕ್ಕೆ, ಕಾಲೇಜನ್ನು ಮುಚ್ಚುವುದಕ್ಕೆ ಮೊದಲು ಮೂರು ತಿಂಗಳುಗಳಿಗಿಂತ ಕಡಿಮೆ ಇಲ್ಲದಂತೆ ಆ ಬಗ್ಗೆ ಕಾರಣಗಳನ್ನು ತಿಳಿಸಿ ನೋಟೀಸನ್ನು ನೀಡತಕ್ಕದ್ದು.

(2) ಕಾಲೇಜಿನ ಅಥವಾ ವ್ಯಾಸಂಗ ಕ್ರಮದ ಮುಚ್ಚುವಿಕೆಯ ಅರ್ಜಿಯನ್ನು ವಿದ್ಯಾವಿಷಯಕ ಪರಿಷತ್ತು ಮತ್ತು ಮಂಡಳಿಗಳು ಪರಿಗಣಿಸತಕ್ಕದ್ದು ಮತ್ತು ಅವು ಅದರ ಮೇಲೆ ಸೂಕ್ತ ಗೊತ್ತುವಳಿಗಳನ್ನು ಅಂಗೀಕರಿಸತಕ್ಕದ್ದು.

(3) ಕುಲಸಚಿವರು, ಅರ್ಜಿಯನ್ನು ಮತ್ತು ವಿದ್ಯಾವಿಷಯಕ ಪರಿಷತ್ತಿನ ಮತ್ತು ಮಂಡಳಿಯ ಗೊತ್ತುವಳಿಗಳನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಅದು ಅವುಗಳನ್ನು ಪರಿಗಣಿಸಿದ ತರುವಾಯ ಮುಚ್ಚುವ ಬಗ್ಗೆ ಅನುಮತಿ ನೀಡಬೇಕೆಂದು ಅಥವಾ ಮುಚ್ಚುವಿಕೆಗೆ ಅನುಮತಿ ನಿರಾಕರಿಸಬೇಕೆಂದು ವಿಶ್ವವಿದ್ಯಾಲಯಕ್ಕೆ ನಿರ್ದೇಶನ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದಕ್ಕನುಸಾರ ಆದೇಶಗಳನ್ನು ಹೊರಡಿಸತಕ್ಕದ್ದು.

(4) ಆಡಳಿತ ಮಂಡಳಿಯು, ಶೈಕ್ಷಣಿಕ ವರ್ಷದ ಚಾಲ್ತಿ ಅವಧಿಯಲ್ಲಿ ಮತ್ತು ವಿಶ್ವವಿದ್ಯಾಲಯವು ಸಂಬಂಧಪಟ್ಟ ವ್ಯಾಸಂಗಕ್ರಮದ ವಾರ್ಷಿಕ ಪರೀಕ್ಷೆಗಳನ್ನು ನಡೆಸುವವರೆಗೆ ಮತ್ತು ವಿಶ್ವವಿದ್ಯಾಲಯವು ಮುಚ್ಚಬಹುದೆಂದು ಒಂದು ಔಪಚಾರಿಕ ಆದೇಶವನ್ನು ಹೊರಡಿಸುವವರೆಗೆ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚತಕ್ಕದ್ದಲ್ಲ.

(5) ಹಾಗೆ ಮುಚ್ಚಲಾದ ಕಾಲೇಜುಗಳ ವಿದ್ಯಾರ್ಥಿಗಳಿಗೆ ಅವರ ವರ್ಗಾವಣೆಯ ನಂತರ, ವಿಶ್ವವಿದ್ಯಾಲಯವು, ಹತ್ತಿರವಿರುವ ಕಾಲೇಜಿನಲ್ಲಿ ಸಂಬಂಧಪಟ್ಟ ವ್ಯಾಸಂಗಕ್ರಮದಲ್ಲಿ ಪ್ರವೇಶ ಸಂಖ್ಯೆಯನ್ನು ಅಂಥ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡುವಷ್ಟರಮಟ್ಟಿಗೆ ಹೆಚ್ಚಿಸಿ ಪ್ರವೇಶವನ್ನು ನೀಡತಕ್ಕದ್ದು ಮತ್ತು ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಹಾಗೆ ಮುಚ್ಚಲ್ಪಟ್ಟ ಕಾಲೇಜಿನಿಂದ, ಯಾವ ಕಾಲೇಜಿನಲ್ಲಿ ಅಂಥ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುವರೋ ಅಲ್ಲಿಗೆ ವರ್ಗಾಯಿಸತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸಿನ ಅವಧಿಯು ಮುಕ್ತಾಯವಾದ ತರುವಾಯ ತೊಂಬತ್ತು ದಿನಗಳೊಳಗೆ, ಹಾಗೆ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ನಿರಾಕರಿಸುವ ಯಾವುದೇ ನಿರ್ದೇಶನವನ್ನು ರಾಜ್ಯ ಸರ್ಕಾರವು ನೀಡದಿದ್ದರೆ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಕಾಲೇಜನ್ನು ಅಥವಾ ಸಂದರ್ಭಾನುಸಾರ ವ್ಯಾಸಂಗಕ್ರಮವನ್ನು ಮುಚ್ಚಲು ಆಡಳಿತ ಮಂಡಳಿಗೆ ಅನುಮತಿ ನೀಡಲಾಗಿದೆ ಎಂದು ಭಾವಿಸತಕ್ಕದ್ದು.

**50. ಕೆಲವು ಸಂಸ್ಥೆಗಳಿಗೆ ಮಾನ್ಯತೆ.-** (1) ಸಂಶೋಧನೆ ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ಅಥವಾ ವಿಶೇಷ ಅಧ್ಯಯನಗಳನ್ನು ನಡೆಸುವ ಕಾಲೇಜುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಉದ್ದೇಶಕ್ಕಾಗಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಯೆಂದು ಮಂಡಳಿಯು ಮಾನ್ಯತೆ ನೀಡಬಹುದು.

(2) ಯಾವುದೇ ಅಂಥ ಮಾನ್ಯತೆಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಕಾರಣಗಳಿಗಾಗಿ ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

**51. ಕಾಲೇಜುಗಳ ಪರಿವೀಕ್ಷಣೆ ಮತ್ತು ವರದಿಗಳು.-**(1) ಖಾಯಂ ಆಗಿ ಸಂಯೋಜನೆಗೊಂಡ ಕಾಲೇಜುಗಳೂ ಒಳಗೊಂಡಂತೆ ಸಂಯೋಜನೆಗೊಂಡ ಪ್ರತಿಯೊಂದು ಕಾಲೇಜು, ಮಂಡಳಿಯು ವಿದ್ಯಾವಿಷಯಕ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಕಾಲೇಜಿನ ಅಥವಾ ಸಂಸ್ಥೆಯ ದಕ್ಷತೆಯನ್ನು ಮತ್ತು ಅದು ಸಾಧಿಸಿದ ಶೈಕ್ಷಣಿಕ ಗುಣಮಟ್ಟವನ್ನು ನಿರ್ಣಯಿಸುವುದಕ್ಕೆ ಸಾಧ್ಯವಾಗುವಂತೆ ಅಗತ್ಯಪಡಿಸಬಹುದಾದಂಥ ವರದಿಗಳನ್ನು, ವಿವರಣ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ಕುಲಸಚಿವರಿಗೆ ಒದಗಿಸತಕ್ಕದ್ದು.

(2) ಮಂಡಳಿಯು, ಅಂಥ ಪ್ರತಿಯೊಂದು ಕಾಲೇಜನ್ನು ಈ ಉದ್ದೇಶಕ್ಕಾಗಿ ರಚಿಸಿದ ಒಂದು ಸಮಿತಿಯು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಮಂಡಳಿಯು, ಹಾಗೆ ಪರಿವೀಕ್ಷಣೆ ನಡೆಸಿದ ಮೇಲೆ ಯಾವುದೇ ಕಾಲೇಜನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ, ಯಾವುವೇ ವಿಷಯಗಳ ಸಂಬಂಧದಲ್ಲಿ ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಕ್ರಮವನ್ನು ಕೈಗೊಳ್ಳಲು ಕೋರಬಹುದು.

(4) ಪ್ರತಿಯೊಂದು ಕಾಲೇಜು, ವಿಶ್ವವಿದ್ಯಾಲಯವು ವಿದ್ಯಾವಿಷಯಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮತ್ತು ಅದಕ್ಕೆ ಪೂರಕವಾದ ವಿಷಯಗಳ ಬಗ್ಗೆ ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

## ಅಧ್ಯಾಯ – VIII

## ಶಾಸನಗಳು ಮತ್ತು ವಿನಿಯಮಗಳು

**52. ಶಾಸನಗಳು.–** ಈ ಅಧ್ಯಾದೇಶದ ಉಪಬಂಧಗಳಿಗೊಳಪಟ್ಟು, ವಿಶ್ವವಿದ್ಯಾಲಯದ ಶಾಸನಗಳು, ವಿಶ್ವವಿದ್ಯಾಲಯದ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ವಿಷಯಕ್ಕೆ ಉಪಬಂಧ ಕಲ್ಪಿಸಬಹುದು ಮತ್ತು ವಿಶೇಷವಾಗಿ, ಈ ಮುಂದಿನವುಗಳಿಗೆ ಉಪಬಂಧ ಕಲ್ಪಿಸತಕ್ಕದ್ದು, ಎಂದರೆ:–

(1) ಪ್ರಾಧಿಕಾರಗಳ ರಚನೆ, ಅಧಿಕಾರಗಳು ಮತ್ತು ಕರ್ತವ್ಯಗಳು;

(2) ವಿಶ್ವವಿದ್ಯಾಲಯದ ವಿದ್ಯಾವಿಷಯಕ ಜೀವನವನ್ನು ಉತ್ತಮಗೊಳಿಸಲು ಅವಶ್ಯವಾದ ಅಥವಾ ಅಪೇಕ್ಷಣೀಯವಾದ ಇತರ ನಿಕಾಯಗಳ ಅಥವಾ ಸಮಿತಿಗಳ ರಚನೆ, ಸಂಯೋಜನೆ ಮತ್ತು ಪ್ರಕಾರ್ಯಗಳು;

(3) ಕುಲಪತಿಯವರನ್ನು ಹೊರತುಪಡಿಸಿ ವಿಶ್ವವಿದ್ಯಾಲಯದ ಅಧಿಕಾರಿಗಳ ಪದನಾಮಗಳು, ಅಧಿಕಾರಗಳು, ಪ್ರಕಾರ್ಯಗಳು, ಕರ್ತವ್ಯಗಳು ಮತ್ತು ನೇಮಕಾತಿಯ ರೀತಿ ಮತ್ತು ಆಯ್ಕೆಗಳು ಮತ್ತು ಸೇವೆಯ ನಿಬಂಧನೆಗಳು ಮತ್ತು ಷರತ್ತುಗಳು;

(4) ವಿಶ್ವವಿದ್ಯಾಲಯದ ಬೋಧಕರ ಮತ್ತು ಇತರ ಸಿಬ್ಬಂದಿಗಳ ವರ್ಗೀಕರಣ, ವಿದ್ಯಾರ್ಹತೆ ಮತ್ತು ನೇಮಕಾತಿಯ ರೀತಿ, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಹಾಗೂ ಕರ್ತವ್ಯಗಳು;

(5) ವಿಶ್ವವಿದ್ಯಾಲಯಗಳ ಫ್ಯಾಕಲ್ಟಿಗಳು, ಇಲಾಖೆಗಳು, ಸಂಶೋಧನಾ ಸಂಸ್ಥೆಗಳು, ಕೇಂದ್ರಗಳು ಮತ್ತು ಇತರ ಘಟಕಗಳ ಸ್ಥಾಪನೆ, ಸಮ್ಮಿಲನ, ಉಪವಿಭಜನೆ ಅಥವಾ ರದ್ದತಿ;

(6) ವಿಶ್ವವಿದ್ಯಾಲಯದ ಅಧಿಕಾರಿಗಳು, ಬೋಧಕರು ಮತ್ತು ಇತರ ಸಿಬ್ಬಂದಿಗಳ ಪ್ರಯೋಜನಕ್ಕಾಗಿ ವಿಶ್ರಾಂತಿ ವೇತನ ಮತ್ತು ವಿಮಾ ಯೋಜನೆಗಳ ರಚನೆ ಮತ್ತು ಅಂಥ ಯೋಜನೆಗಳ ನಿಯಮಗಳು, ನಿಬಂಧನೆಗಳು ಮತ್ತು ಷರತ್ತುಗಳು;

(7) ಪದವಿ ಮತ್ತು ಡಿಪ್ಲೋಮಾಗಳನ್ನು ಪ್ರದಾನ ಮಾಡಲು ಘಟಕೋತ್ಸವಗಳನ್ನು ನಡೆಸುವುದು;

(8) ಗೌರವ ಪದವಿಗಳು ಮತ್ತು ವಿದ್ಯಾವಿಷಯಕ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು ಮತ್ತು ಹಿಂಪಡೆಯುವುದು;

(9) ವಿಶ್ವವಿದ್ಯಾಲಯದಡಿಯಲ್ಲಿ, ನೇಮಕವಾದ ಅಧಿಕಾರಿಗಳು, ಬೋಧಕರು ಮತ್ತು ಇತರ ವ್ಯಕ್ತಿಗಳ ಸೇವಾಷರತ್ತುಗಳು ಸಂದಾಯಮಾಡಬೇಕಾದ ಪರಿಶ್ರಮಧನ ಮತ್ತು ಪ್ರಯಾಣ ಮತ್ತು ದಿನ ಭತ್ಯೆಗಳೂ ಸೇರಿದಂತೆ ಭತ್ಯೆಗಳು;

(10) ಪರೀಕ್ಷಾ ನಿಕಾಯಗಳು ಮತ್ತು ಪರೀಕ್ಷಕರ ನೇಮಕಾತಿಯ ಷರತ್ತುಗಳು ಮತ್ತು ವಿಧಾನ;

(11) ವಿಶ್ವವಿದ್ಯಾಲಯವು ಸ್ಥಾಪಿಸಿದ ಅಥವಾ ನಿರ್ವಹಿಸುವ ಕಾಲೇಜುಗಳು, ಕೇಂದ್ರಗಳು, ವಿಭಾಗಗಳು, ಇಲಾಖೆಗಳು, ವಲಯ ಮತ್ತು ಪ್ರಾದೇಶಿಕ ಸಂಸ್ಥೆಗಳು, ಕೃಷಿ ವಿಜ್ಞಾನ ಕೇಂದ್ರಗಳು ಮತ್ತು ಇತರ ಸಂಸ್ಥೆಗಳ ನಿರ್ವಹಣೆ;

(12) ವಿಶ್ವವಿದ್ಯಾಲಯದ ಅಧಿಕಾರಿಗಳು, ಬೋಧಕರು ಮತ್ತು ಇತರ ಸಿಬ್ಬಂದಿಗಳ ನೇಮಕಾತಿಗಾಗಿ ಆಯ್ಕೆ ಸಮಿತಿಗಳ ರಚನೆ;

(13) ಈ ಅಧ್ಯಾದೇಶದ ಮೂಲಕ ಶಾಸನಗಳ ಉಪಬಂಧ ಕಲ್ಪಿಸಬೇಕಾದ ಇತರ ಎಲ್ಲಾ ವಿಷಯಗಳು.

**53. ಶಾಸನಗಳ ರಚನೆ.–** (1) ಇನ್ನು ಮುಂದೆ ಉಪಬಂಧಿಸಿದ ರೀತಿಯಲ್ಲಿ ಮಂಡಳಿಯು ಯಾವುದೇ ಶಾಸನವನ್ನು ರಚಿಸಬಹುದು, ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(2) ಈ ಅಧ್ಯಾದೇಶದಡಿಯಲ್ಲಿ ರಚಿಸಿದ ಶಾಸನಗಳನ್ನು ಮಂಡಳಿಯು ಪ್ರಸ್ತಾಪಿಸತಕ್ಕದ್ದು ಮತ್ತು ಸರ್ಕಾರದ ಮೂಲಕ ಕುಲಾಧಿಪತಿಯವರಿಗೆ ಅವರ ಅನುಮತಿ ಕೋರಿ ಸಲ್ಲಿಸತಕ್ಕದ್ದು ಮತ್ತು ಕುಲಾಧಿಪತಿಯವರ ಅನುಮತಿ ಪಡೆದ ಮತ್ತು ಸರ್ಕಾರಿ ರಾಜ್ಯಪತ್ರದಲ್ಲಿ ಅದು ಪ್ರಕಟಣೆಯಾದ ತರುವಾಯ ಮಾತ್ರವೇ ಇದು ಜಾರಿಗೆ ಬರತಕ್ಕದ್ದು.

(3) ಈ ಅಧ್ಯಾದೇಶದಡಿಯಲ್ಲಿ ರಚಿಸಲಾದ ಎಲ್ಲಾ ಶಾಸನಗಳು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಗೊಳ್ಳತಕ್ಕದ್ದು.

**54. ವಿನಿಯಮಗಳು.–** (1) ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಈ ಅಧ್ಯಾದೇಶಕ್ಕೆ ಮತ್ತು ಶಾಸನಗಳಿಗೆ ಸುಸಂಗತವಾದ ವಿನಿಯಮಗಳನ್ನು,–

(i) ತಮ್ಮ ಸಭೆಗಳ ಕಾರ್ಯ ವಿಧಾನ ಮತ್ತು ಕೋರಂಗಾಗಿ ಅಗತ್ಯವಿರುವ ಸದಸ್ಯರ ಸಂಖ್ಯೆ ನಿಗದಿಪಡಿಸುವುದಕ್ಕಾಗಿ:

(ii) ಈ ಅಧ್ಯಾದೇಶ ಅಥವಾ ಶಾಸನಗಳ ಪ್ರಕಾರ ವಿನಿಯಮಗಳ ಮೂಲಕ ನಿಯಂತ್ರಿಸಬೇಕಾದ ವಿಷಯಗಳನ್ನು ಉಪಬಂಧಿಸುವುದಕ್ಕಾಗಿ:

(iii) ಈ ಅಧ್ಯಾದೇಶ ಮತ್ತು ಶಾಸನಗಳಿಂದ ಉಪಬಂಧಿಸಿರದ ಮತ್ತು ಪ್ರಾಧಿಕಾರಗಳಿಗೇ ಪೂರ್ಣವಾಗಿ ಸಂಬಂಧಪಟ್ಟ ಯಾವುದೇ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ:

– ರಚಿಸಬಹುದು.

(2) ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ರಚಿಸಿದ ವಿನಿಯಮಗಳು, ಈ ಬಗ್ಗೆ ಮಂಡಳಿಯು ಕಾಲದಿಂದ ಕಾಲಕ್ಕೆ ನೀಡುವ ನಿರ್ದೇಶನಗಳಿಗೆ ಒಳಪಟ್ಟಿರತಕ್ಕದ್ದು.

(3) ವಿದ್ಯಾವಿಷಯಕ ಪರಿಷತ್ತು, ಈ ಅಧ್ಯಾದೇಶದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು, ವ್ಯಾಸಂಗ ಕ್ರಮಗಳು, ಪರೀಕ್ಷಾ ಪದ್ಧತಿ, ಶೈಕ್ಷಣಿಕ ಕರ್ತವ್ಯಗಳ ಕಾಲಾನುಕ್ರಮ, ವಿಶ್ವವಿದ್ಯಾಲಯದ ಪದವಿಗಳು ಮತ್ತು ಡಿಪ್ಲೊಮಾಗಳನ್ನು ನೀಡುವುದು ಮತ್ತು ಶಿಕ್ಷಣ ನಿರ್ದೇಶಕರಿಗೆ ಸಂಬಂಧಿಸಿದ ಇತರ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ವಿನಿಯಮಗಳನ್ನು ರಚಿಸತಕ್ಕದ್ದು.

(4) ವಿದ್ಯಾವಿಷಯಕ ಪರಿಷತ್ತು, ಹಿಂದಿನ ಉಪಪ್ರಕರಣಗಳ ಉಪಬಂಧಗಳ ಸಾಮಾನ್ಯಾನ್ವಯಕ್ಕೆ ಧಕ್ಕೆಯಾಗದಂತೆ, ವಿನಿಯಮಗಳನ್ನು,–

(ಎ) ಪದವಿಗಳು ಮತ್ತು ಡಿಪ್ಲೊಮಾಗಳನ್ನು ಪ್ರದಾನಮಾಡಲು ಘಟಕೋತ್ಸವಗಳನ್ನು ನಡೆಸುವುದಕ್ಕಾಗಿ;

(ಬಿ) ಗೌರವ ಪದವಿಗಳು, ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು, ಪದವಿ ಹಿಂಪಡೆಯುವುದು;

(ಸಿ) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಸ್ಥಾಪನೆ ಮತ್ತು ರದ್ಧತಿಗಾಗಿ;

(ಡಿ) ಫೆಲೋಶಿಪ್‌ಗಳು, ಸ್ಕಾಲರ್‌ಶಿಪ್‌ಗಳು, ಸ್ಟೈಪೆಂಡುಗಳು, ಶಿಷ್ಯವೇತನಗಳು, ಪದಕಗಳು ಮತ್ತು ಪ್ರಶಸ್ತಿಗಳನ್ನು ಸ್ಥಾಪಿಸುವುದು ಮತ್ತು ಅವುಗಳನ್ನು ನೀಡುವ ಬಗ್ಗೆ ಷರತ್ತುಗಳಿಗಾಗಿ;

(ಇ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಪ್ರವೇಶ ಮತ್ತು ಅದರ ಪಟ್ಟಿಯಲ್ಲಿ ಹೆಸರು ಸೇರಿಸುವ ಮತ್ತು ವಿದ್ಯಾರ್ಥಿಗಳಾಗಿ ಮುಂದುವರಿಸುವ ಮತ್ತು ಪಟ್ಟಿಯಿಂದ ವಿದ್ಯಾರ್ಥಿಗಳನ್ನು ಬಿಟ್ಟುಬಿಡುವ ಬಗ್ಗೆ ಷರತ್ತುಗಳು ಮತ್ತು ಪ್ರಕ್ರಿಯೆಗಾಗಿ;

(ಎಫ್) ವಿಶ್ವವಿದ್ಯಾಲಯವು ಚಾರ್ಜು ಮಾಡಬಹುದಾದ ಶುಲ್ಕಕ್ಕಾಗಿ;

(ಜಿ) ವಿಶ್ವವಿದ್ಯಾಲಯದ ಎಲ್ಲಾ ಪದವಿಗಳು, ಡಿಪ್ಲೊಮಾಗಳು ಮತ್ತು ಪ್ರಮಾಣ ಪತ್ರಗಳಿಗಾಗಿ ರಚಿಸಲಾಗುವ ವ್ಯಾಸಂಗಗಳಿಗಾಗಿ;

(ಎಚ್) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೊಮಾಗಳು ಅಥವಾ ಇತರ ಕೋರ್ಸುಗಳು ಮತ್ತು ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಪ್ರವೇಶಿಸಲು ಷರತ್ತುಗಳು ಮತ್ತು ಪದವಿಗಳು ಮತ್ತು ಡಿಪ್ಲೊಮಾಗಳನ್ನು ಪಡೆಯುವುದಕ್ಕಾಗಿ ಅಗತ್ಯವಾದ ಅರ್ಹತೆಗಾಗಿ;

(ಐ) ಪದವಿಗಳು ಮತ್ತು ಇತರ ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವ ಷರತ್ತುಗಳಿಗಾಗಿ;

(ಜೆ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತನ್ನು ಕಾಪಾಡುವುದಕ್ಕಾಗಿ;

(ಕೆ) ವಿದ್ಯಾರ್ಥಿನಿಯರ ವಸತಿ, ಶಿಸ್ತು ಮತ್ತು ಅವರಿಗೆ ಬೋಧನೆಗೆ ಯಾವುದಾದರೂ ವಿಶೇಷ ಏರ್ಪಾಡುಗಳನ್ನು ಮಾಡುವುದಕ್ಕಾಗಿ ಮತ್ತು ವಿದ್ಯಾರ್ಥಿನಿಯರಿಗಾಗಿಯೇ ವಿಶೇಷ ಕೋರ್ಸುಗಳಿಗೆ ಉಪಬಂಧಕಲ್ಪಿಸುವುದಕ್ಕಾಗಿ;

(ಎಲ್) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸದ ಷರತ್ತುಗಳು ಮತ್ತು ವಿದ್ಯಾರ್ಥಿನಿಲಯಗಳ ನಿವಾಸಿಸುವುದಕ್ಕಾಗಿ ಶುಲ್ಕವನ್ನು ವಿಧಿಸುವುದಕ್ಕಾಗಿ;

(ಎಂ) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಮಾನ್ಯತೆ ಮತ್ತು ನಿರ್ವಹಣೆಗಾಗಿ;

– ರಚಿಸತಕ್ಕದ್ದು.

## ಅಧ್ಯಾಯ - IX

## ಸಂಕೀರ್ಣ

**55. ಕಾರ್ಯಗಳ ಹಾಗೂ ವ್ಯವಹರಣೆಗಳ ಸಿಂಧುತ್ವದ ಉಳಿಸುವಿಕೆಗಳು.–** (1) ಈ ಅಧ್ಯಾದೇಶದ ಅಡಿಯಲ್ಲಿ ಮಾಡಿದ ಯಾವುದೇ ಕಾರ್ಯ ಅಥವಾ ಕೈಗೊಂಡ ವ್ಯವಹರಣೆಗಳನ್ನು ಕೇವಲ ಈ ಮುಂದಿನ ಕಾರಣಗಳಿಗಾಗಿ ಪ್ರಶ್ನಿಸತಕ್ಕದ್ದಲ್ಲ, ಎಂದರೆ:–

(i) ಯಾವುದೇ ಪ್ರಾಧಿಕಾರದ ರಚನೆಯಲ್ಲಿ ಯಾವುದೇ ಖಾಲಿಸ್ಥಾನ ಅಥವಾ ದೋಷ ಇರುವುದು, ಅಥವಾ

(ii) ಪ್ರಕರಣದ ಗುಣಾಂಶಗಳಿಗೆ ಬಾಧೆ ಉಂಟುಮಾಡದ ಆ ಕಾರ್ಯ ಅಥವಾ ವ್ಯವಹರಣೆಗಳಲ್ಲಿರುವ ಯಾವುದೇ ದೋಷ ಅಥವಾ ಕ್ರಮಬಾಹಿರತೆ.

**56. ವಿದ್ಯಾರ್ಥಿಗಳ ವಾಸಸ್ಥಳ.–** ವಿಶ್ವವಿದ್ಯಾಲಯವು ನಿರ್ವಹಿಸುವ ಅಥವಾ ಕುಲಪತಿಯವರು ಅನುಮೋದಿಸಿದ ವಾಸಸ್ಥಳದಲ್ಲಿ ವಿದ್ಯಾರ್ಥಿಗಳು ನಿಯಮಿಸಲಾದಂಥ ಷರತ್ತುಗಳಗೊಳಪಟ್ಟು ವಾಸಿಸತಕ್ಕದ್ದು. ಆದಾಗ್ಯೂ, ವಿಶ್ವವಿದ್ಯಾಲಯದಲ್ಲಿ ಅಂಥ ವಾಸಸ್ಥಳವು ದೊರಕದಿದ್ದಲ್ಲಿ ವಿಶ್ವವಿದ್ಯಾಲಯದ ಕುಲಪತಿಯವರು ಅಥವಾ ಅಧಿಕೃತರಾದ ಒಬ್ಬ ಅಧಿಕಾರಿಯು ವಿದ್ಯಾರ್ಥಿಗಳು ತಮ್ಮ ತಂದೆ ತಾಯಿಯವರೊಂದಿಗೆ ಅಥವಾ ಖಾಸಗಿ ವಾಸಸ್ಥಳಗಳಲ್ಲಿ ವಾಸಿಸಲು ಅನುಮತಿಸಬಹುದು.

**57. ವಾರ್ಷಿಕ ವರದಿ.–** ವಿಶ್ವವಿದ್ಯಾಲಯದ ವಾರ್ಷಿಕ ವರದಿಯನ್ನು ಕುಲಸಚಿವರು ಅಥವಾ ಕುಲಪತಿಯವರ ನಿರ್ದೇಶನಗಳಡಿಯಲ್ಲಿ ಇತರ ಯಾವೊಬ್ಬ ಅಧಿಕಾರಿಯು ಹಣಕಾಸು ವರ್ಷದ ಮುಕ್ತಾಯದಿಂದ ಆರು ತಿಂಗಳೊಳಗೆ ತಯಾರಿಸತಕ್ಕದ್ದು ಮತ್ತು ಇದನ್ನು ಪರಿಗಣನೆಗೆ ತೆಗೆದುಕೊಳ್ಳುವ ಸಭೆಯು ನಡೆಯುವುದಕ್ಕಿಂತ ಒಂದು ತಿಂಗಳ ಮೊದಲು ಮಂಡಳಿಯ ಸದಸ್ಯರುಗಳಿಗೆ ಪರಿಚಲನೆ ಮಾಡತಕ್ಕದ್ದು. ಮಂಡಳಿಯು ವಾರ್ಷಿಕ ವರದಿಯ ಪರಿಗಣನೆಯ ತರುವಾಯ ಅದರ ಪ್ರತಿಯನ್ನು ಸರ್ಕಾರದ ಮುಂದಿಡತಕ್ಕದ್ದು, ಅದನ್ನು ವಿಧಾನಮಂಡಲದ ಎರಡೂ ಸದನಗಳ ಮುಂದೆ ಮಂಡಿಸತಕ್ಕದ್ದು.

**58. ಅಧಿಕಾರಗಳ ಪ್ರತ್ಯಾಯೋಜನೆ.–** ಕುಲಪತಿಯವರು, ಆದೇಶದ ಮೂಲಕ, ಈ ಅಧ್ಯಾದೇಶ ಅಥವಾ ಅದರಡಿಯಲ್ಲಿ ರಚಿಸಲಾಗಿರುವ ಶಾಸನಗಳಡಿಯಲ್ಲಿ ತಾನು ಚಲಾಯಿಸಬಹುದಾದ ಅಧಿಕಾರಗಳನ್ನು ಕುಲಪತಿಯವರು ಸರಿಯಾಗಿದೆಯೆಂದು

ಭಾವಿಸಬಹುದಾದಂಥ ಷರತ್ತುಗಳು ಮತ್ತು ಮಿತಿಗಳಿಗೊಳಪಟ್ಟು ಯಾವುದೇ ಪ್ರಾಧಿಕಾರ, ಅಧಿಕಾರಿ, ಕಾಲೇಜುಗಳ ಮುಖ್ಯಸ್ಥರು, ಇಲಾಖೆಗಳು, ಸಂಸ್ಥೆಗಳು ಅಥವಾ ಘಟಕಗಳು ಅಥವಾ ಕಚೇರಿಗೆ ಪ್ರತ್ಯಾಯೋಜಿಸಬಹುದು.

**59. ಅಡ್‌-ಹಾಕ್‌ ಸಮಿತಿಗಳ ರಚನೆ.–** ಈ ಅಧ್ಯಾದೇಶದಲ್ಲಿ ಏನೇ ಇದ್ದರೂ ಮತ್ತು ಈ ಅಧ್ಯಾದೇಶ ಅಥವಾ ಶಾಸನಗಳು ಅಥವಾ ವಿನಿಯಮಗಳ ಉಪಬಂಧಗಳನ್ವಯ ವಿಶ್ವವಿದ್ಯಾಲಯಗಳ ಪ್ರಾಧಿಕಾರಗಳು ಅಥವಾ ನಿಕಾಯಗಳು ರಚನೆಯಾಗುವವರೆಗೆ ಕುಲಾಧಿಪತಿಯವರ ಪೂರ್ವಾನುಮೋದನೆಗೊಳಪಟ್ಟು ಕುಲಪತಿಯವರು, ಈ ಅಧ್ಯಾದೇಶ ಅಥವಾ ಶಾಸನಗಳು ಅಥವಾ ವಿನಿಯಮಗಳಡಿಯಲ್ಲಿನ ಅಂಥ ಪ್ರಾಧಿಕಾರಗಳ ಅಥವಾ ನಿಕಾಯಗಳ ಯಾವುದೇ ಅಧಿಕಾರಗಳನ್ನು ಚಲಾಯಿಸಲು, ಪ್ರಕಾರ್ಯಗಳನ್ನು ನಿರ್ವಹಿಸಲು ಮತ್ತು ಕರ್ತವ್ಯಗಳನ್ನು ಮಾಡಲು ತಾತ್ಕಾಲಿಕವಾಗಿ ಅಡ್‌-ಹಾಕ್‌ ಸಮಿತಿಗಳನ್ನು ನೇಮಿಸಬಹುದು.

**60. ಪ್ರಾಧಿಕಾರಗಳು ಅಥವಾ ನಿಕಾಯಗಳ ಸ್ಥಾಪನೆಯಲ್ಲಿ ವಿವಾದಗಳು.–** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರ ಅಥವಾ ಇತರ ನಿಕಾಯದ ಸದಸ್ಯನಾಗಿ ನೇಮಕಾತಿ ಹೊಂದಲು ಅಥವಾ ಸದಸ್ಯನಾಗಲು ಯಾವುದೇ ವ್ಯಕ್ತಿಯ ಅರ್ಹತೆಯ ಬಗ್ಗೆ ಯಾವುದೇ ಪ್ರಶ್ನೆಯು ಉದ್ಭವಿಸಿದಲ್ಲಿ, ಆ ವಿಷಯವನ್ನು ಕುಲಾಧಿಪತಿಯವರಿಗೆ ತೀರ್ಮಾನಕ್ಕಾಗಿ ಕಳುಹಿಸತಕ್ಕದ್ದು ಮತ್ತು ಅದರ ಬಗ್ಗೆ ಅವರ ತೀರ್ಮಾನವೇ ಅಂತಿಮವಾಗಿರತಕ್ಕದ್ದು:

ಪರಂತು, ಯಾವುದೇ ಅಂಥ ತೀರ್ಮಾನವನ್ನು ತೆಗೆದುಕೊಳ್ಳುವ ಮುಂಚೆ, ಕುಲಾಧಿಪತಿಯವರು ಅದರಿಂದ ಬಾಧಿತನಾದ ವ್ಯಕ್ತಿಗೆ ತನ್ನ ಅಹವಾಲು ಹೇಳಿಕೊಳ್ಳಲು ಯುಕ್ತ ಅವಕಾಶವನ್ನು ನೀಡತಕ್ಕದ್ದು.

**61. ವಿಶ್ವವಿದ್ಯಾಲಯದ ಪುನರವಲೋಕನ ಆಯೋಗದ ನೇಮಕ.–** (1) ಕುಲಾಧಿಪತಿಯು, ಪ್ರತಿ ಐದು ವರ್ಷಗಳಿಗೊಮ್ಮೆ ವಿಶ್ವವಿದ್ಯಾಲಯದ ಕಾರ್ಯ ನಿರ್ವಹಣೆಯನ್ನು ಪುನರವಲೋಕಿಸುವುದಕ್ಕಾಗಿ ಮತ್ತು ಶಿಫಾರಸುಗಳನ್ನು ಮಾಡುವುದಕ್ಕಾಗಿ ಒಂದು ಆಯೋಗವನ್ನು ರಚಿಸತಕ್ಕದ್ದು.

(2) ಆಯೋಗವು, ಮೂವರಿಗೆ ಕಡಿಮೆಯಿಲ್ಲದಂತೆ ಕುಲಾಧಿಪತಿಯವರು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ ನೇಮಿಸಿದ ತೋಟಗಾರಿಕೆ ಕ್ಷೇತ್ರದಲ್ಲಿ ಪ್ರಸಿದ್ಧ ಶಿಕ್ಷಣ ತಜ್ಞರನ್ನು ಒಳಗೊಂಡಿರತಕ್ಕದ್ದು. ಅವರಲ್ಲಿ ಒಬ್ಬರು ಅಧ್ಯಕ್ಷರಾಗಿರತಕ್ಕದ್ದು.

(3) ಸದಸ್ಯರ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು, ಕುಲಾಧಿಪತಿಯವರು ನಿರ್ಧರಿಸ ಬಹುದಾದಂಥವುಗಳು ಆಗಿರತಕ್ಕದ್ದು.

(4) ಆಯೋಗವು ತಾನು ಸೂಕ್ತವೆಂದು ಭಾವಿಸುವಂಥ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯವರಿಗೆ ಮತ್ತು ರಾಜ್ಯ ಸರ್ಕಾರಕ್ಕೆ ಶಿಫಾರಸುಗಳನ್ನು ಮಾಡತಕ್ಕದ್ದು.

(5) ಕುಲಾಧಿಪತಿಯವರು, ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ, ಶಿಫಾರಸ್ಸಿನ ಮೇಲೆ ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಳ್ಳಬಹುದು.

(6) ರಾಜ್ಯ ಸರ್ಕಾರವು, ಕೈಗೊಂಡ ಕ್ರಮವನ್ನು ವಿವರಿಸುವ ಜ್ಞಾಪನ ಪತ್ರದೊಡನೆ ಶಿಫಾರಸುಗಳ ಒಂದು ಪ್ರತಿಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**62. ವಿಶ್ವವಿದ್ಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಹುದ್ದೆಗಳಿಗೆ ನೇಮಕಾತಿ.–** (1) ಈ ಅಧ್ಯಾದೇಶದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದ ವ್ಯವಹರಣೆಗಳಿಗೆ ಸಂಬಂಧಿಸಿದ ಹುದ್ದೆಗಳಿಗೆ ನೇಮಕಾತಿ ಮತ್ತು ಸೇವೆಗಳನ್ನು ನಿಯಮಿಸಲಾದಂತೆ ಮಂಡಳಿಯ ಪೂರ್ವಾನುಮತಿಯೊಡನೆ ಕುಲಪತಿಯವರು ಮಾಡಬಹುದು:

ಪರಂತು, ಸಹಾಯಕ ಪ್ರಾಧ್ಯಾಪಕರ ವೇತನ ಶ್ರೇಣಿಯದ್ದಕ್ಕಿಂತ ಕಡಿಮೆ ವೇತನಶ್ರೇಣಿಯಿರುವ ಹುದ್ದೆಗಳ ನೇಮಕಾತಿಯ ಸಂಬಂಧದಲ್ಲಿ ಅಂಥ ಅನುಮೋದನೆಯ ಅವಶ್ಯಕತೆ ಇರತಕ್ಕದ್ದಲ್ಲ.

(2) ಈ ಅಧ್ಯಾದೇಶದಲ್ಲಿ ಏನೇ ಇದ್ದರೂ ಮತ್ತು ಶಾಸನಗಳು ರಚನೆಯಾಗುವ ಅಥವಾ ವಿಶ್ವವಿದ್ಯಾಲಯದ ಪ್ರಾಧಿಕಾರಗಳು ಸ್ಥಾಪನೆಯಾಗುವವರೆಗಿನ ಅವಧಿಗೆ, ವಿಶ್ವವಿದ್ಯಾಲಯದ ವ್ಯವಹರಣೆಗಳ ಸಂಬಂಧದಲ್ಲಿ ಹುದ್ದೆಗಳು ಮತ್ತು ಸೇವೆಗಳಿಗೆ ನೇಮಕಾತಿಗಳನ್ನು, ಕುಲಾಧಿಪತಿಯವರು ಅನುಮೋದಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕುಲಪತಿಯವರು ಮಾಡಬಹುದು.

**63. ತಾತ್ಕಾಲಿಕ ಉಪಬಂಧಗಳು.–** ಈ ಅಧ್ಯಾದೇಶದಲ್ಲಿ ಏನೇ ಇದ್ದರೂ, ಕುಲಪತಿಯು ಕುಲಾಧಿಪತಿಯವರ ಪೂರ್ವಾನುಮೋದನೆಯೊಂದಿಗೆ ಈ ಅಧ್ಯಾದೇಶದ ಪ್ರಾರಂಭದಿಂದ ಒಂದು ವರ್ಷದ ಅವಧಿಗಾಗಿ ಈ ಅಧ್ಯಾದೇಶದ ಉಪಬಂಧಗಳನ್ನು ಕಾರ್ಯಗತಗೊಳಿಸುವ ಉದ್ದೇಶಕ್ಕಾಗಿ ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಬಹುದು ಮತ್ತು ಆ ಉದ್ದೇಶಕ್ಕಾಗಿ ಈ ಅಧ್ಯಾದೇಶದ ಮೂಲಕ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರವು ಅಥವಾ ನಿಕಾಯವು ಚಲಾಯಿಸಬೇಕಾದ ಯಾವುವೇ ಅಧಿಕಾರಗಳನ್ನು ಅಥವಾ ನಿರ್ವಹಿಸಬೇಕಾದ ಯಾವುವೇ ಕರ್ತವ್ಯಗಳನ್ನು ಈ ಅಧ್ಯಾದೇಶದಲ್ಲಿ ಅಥವಾ ಶಾಸನಗಳಲ್ಲಿ ಅಥವಾ ವಿನಿಯಮಗಳಲ್ಲಿ ಉಪಬಂಧಿಸಿದಂತೆ ಅಂಥ ಪ್ರಾಧಿಕಾರವು ಅಥವಾ ನಿಕಾಯವು ಅಸ್ತಿತ್ವಕ್ಕೆ ಬರುವವರೆಗೆ ಚಲಾಯಿಸಬಹುದು ಅಥವಾ ನೆರವೇರಿಸಬಹುದು.

**64. ಸದ್ಭಾವನೆಯಿಂದ ಕೈಗೊಂಡ ಕ್ರಮದ ರಕ್ಷಣೆ.–** ಈ ಅಧ್ಯಾದೇಶದ ಅಥವಾ ಅದರಡಿಯಲ್ಲಿ ರಚಿಸಿದ ಶಾಸನಗಳು ಅಥವಾ ವಿನಿಯಮಗಳಿಗೆ ಅನುಸಾರವಾಗಿ ಸದ್ಭಾವನೆಯಿಂದ ಮಾಡಿದ ಅಥವಾ ಮಾಡಲು ಉದ್ದೇಶಿಸಿದ ಯಾವುದೇ ಕಾರ್ಯಕ್ಕಾಗಿ ವಿಶ್ವವಿದ್ಯಾಲಯದ ಅಥವಾ ಅದರ ಪ್ರಾಧಿಕಾರಗಳ, ನಿಕಾಯಗಳ ಅಥವಾ ಅಧಿಕಾರಿಗಳ ವಿರುದ್ಧ ಯಾವುದೇ ದಾವೆ ಅಥವಾ ಇತರ ಕಾನೂನು ವ್ಯವಹರಣೆ ನಡೆಸಲು ಅವಕಾಶ ಇರತಕ್ಕದ್ದಲ್ಲ ಮತ್ತು ಅವರಿಂದ ಯಾವುದೇ ನಷ್ಟ ಪರಿಹಾರಗಳನ್ನು ಕ್ಲೈಮ್ ಮಾಡತಕ್ಕದ್ದಲ್ಲ.

**65. ತೊಂದರೆಗಳ ನಿವಾರಣೆಗೆ ಅಧಿಕಾರ.– (1)** ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಥವಾ ನಿಕಾಯದ ಮೊದಲ ರಚನೆಯ ಅಥವಾ ಪುನಾರಚನೆಯ ಸಂಬಂಧದಲ್ಲಿ ಅಥವಾ ಈ ಅಧ್ಯಾದೇಶದ ಉಪಬಂಧಗಳನ್ನು ಜಾರಿಗೊಳಿಸುವ ಸಂಬಂಧದಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ತೊಂದರೆಯ ನಿವಾರಣೆಗಾಗಿ ಅವಶ್ಯಕ ಹಾಗೂ ಸಮಂಜಸವೆಂದು ತನಗೆ ಕಂಡುಬರುವಂಥ ಹಾಗೂ ಈ ಅಧ್ಯಾದೇಶದ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧ್ಯಾದೇಶದ ಪ್ರಾರಂಭದ ದಿನಾಂಕದಿಂದ ಐದು ವರ್ಷಗಳು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಸೂಚನೆಯನ್ನು ಹೊರಡಿಸತಕ್ಕದ್ದಲ್ಲ.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಅಧಿಸೂಚನೆಯನ್ನು ಮತ್ತು 8ನೇ ಪ್ರಕರಣದ (9)ನೇ ಉಪ–ಪ್ರಕರಣದಡಿಯಲ್ಲಿ ಹೊರಡಿಸಲಾದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಆದಷ್ಟು ಬೇಗನೆ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಅದು ಅಧಿವೇಶನದಲ್ಲಿರುವಾಗ ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚು ನಿರಂತರ ಅಧಿವೇಶನಗಳಲ್ಲಿ ಅಡಕವಾಗಿರಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಸದರಿ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ರಾಜ್ಯ ವಿಧಾನಮಂಡಲದ ಯಾವೊಂದು ಸದನವು ಅಧಿಸೂಚನೆಯಲ್ಲಿ ಯಾವುದೇ ಮಾರ್ಪಾಡು ಮಾಡಿದರೆ, ಅಥವಾ ಆ ಅಧಿಸೂಚನೆಯು ಪರಿಣಾಮಕ್ಕೆ ಬರತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಹಾಗೂ ಆ ಮಾರ್ಪಾಡು ಅಥವಾ ನಿರ್ದೇಶನವನ್ನು ಇನ್ನೊಂದು ಸದನವು ಒಪ್ಪಿದರೆ ತದನಂತರ ಅಂಥ ಅಧಿಸೂಚನೆಯು ಸಂದರ್ಭಾನುಸಾರ ಹಾಗೆ ಮಾರ್ಪಾಟಾದ ರೀತಿಯಲ್ಲಿ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಯಾವುದೇ ಅಂಥ ಮಾರ್ಪಾಡು ಅಥವಾ ರದ್ದತಿಯು ಈ ಅಧಿಸೂಚನೆಯ ಅಡಿಯಲ್ಲಿ ಈ ಮುಂಚೆ ಮಾಡಲಾದ ಯಾವುದೇ ಕಾರ್ಯದ ಮಾನ್ಯತೆಗೆ ಬಾಧೆ ಉಂಟುಮಾಡತಕ್ಕದ್ದಲ್ಲ.

**66. ಕಾನೂನು ವ್ಯವಹರಣೆ.–** ವಿಶ್ವವಿದ್ಯಾಲಯವು ಹೂಡಿದ ಅಥವಾ ಅದರ ವಿರುದ್ಧವಾದ ಎಲ್ಲಾ ದಾವೆಗಳು ಮತ್ತು ಇತರ ಕಾನೂನು ವ್ಯವಹರಣೆಗಳನ್ನು ವಿಶ್ವವಿದ್ಯಾಲಯದ ಪರವಾಗಿ ಕುಲಸಚಿವರು ಅಥವಾ ಕುಲಪತಿಯವರು ಇದರ ಬಗ್ಗೆ ಆಧಿಕಾರ ನೀಡಿದ ಯಾವೊಬ್ಬ ಇತರ ಅಧಿಕಾರಿಯು ಪ್ರಾರಂಭಿಸತಕ್ಕದ್ದು, ಪ್ರಾಸಿಕ್ಯೂಟ್ ಮಾಡತಕ್ಕದ್ದು ಅಥವಾ ಪ್ರತಿರಕ್ಷಿಸತಕ್ಕದ್ದು.

**67. ನಿರಸನ ಮತ್ತು ಉಳಿಸುವಿಕೆಗಳು.–** (1) ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಆಧ್ಯಾದೇಶ, 2008ನ್ನು (2008 ರ ಆಧ್ಯಾದೇಶ ಸಂಖ್ಯೆ 2) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಆಧ್ಯಾದೇಶದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಆಧ್ಯಾದೇಶದ ಅಡಿಯಲ್ಲಿ ಮಾಡಲಾಗಿದೆ. ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

**ಅನುಸೂಚಿ**

**(2(31)ನೇ ಪ್ರಕರಣವನ್ನು ನೋಡಿ)**

I. **ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು.**

1. ತೋಟಗಾರಿಕೆ ಕಾಲೇಜು, ಮೂಡಿಗೆರೆ

2. ಭತ್ತ ಸಂಶೋಧನೆಯ ಮತ್ತು ಕೃಷಿ ವಿಜ್ಞಾನ ಕೇಂದ್ರ ಪ್ರದೇಶಗಳನ್ನು ಹೊರತುಪಡಿಸಿ ವಲಯ ಕೃಷಿ ಸಂಶೋಧನಾ ಕೇಂದ್ರ, ಮೂಡಿಗೆರೆ

3. ತೆಂಗು ಸಂಶೋಧನಾ ಕೇಂದ್ರ,, ಅರಸೀಕೆರೆ

4. ಕೃಷಿ ವಿಜ್ಞಾನ ಕೇಂದ್ರ ಪ್ರದೇಶವನ್ನು ಹೊರತುಪಡಿಸಿ ವಲಯ ಕೃಷಿ ಸಂಶೋಧನಾ ಕೇಂದ್ರ, ಹಿರಿಯೂರು

5. ಗೋಡಂಬಿ ಸಂಶೋಧನಾ ಕೇಂದ್ರ, ಉಲ್ಲಾಳ

6. ಅಡಿಕೆ ಸಂಶೋಧನಾ ಕೇಂದ್ರ, ಸಿಬಿನಕೆರೆ ತೋಟಗಾರಿಕೆ ಇಲಾಖೆಯ ಫಾರಂ, ತೀರ್ಥಹಳ್ಳಿ

II. **ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ.**

1. ಕಿತ್ತೂರು ರಾಣಿ ಚೆನ್ನಮ್ಮ ತೋಟಗಾರಿಕೆ ಕಾಲೇಜು, ಅರಭಾವಿ
2. ತೋಟಗಾರಿಕೆ ಸಂಶೋಧನಾ ಕೇಂದ್ರ, ಕಣಬರಗಿ
3. ತೋಟಗಾರಿಕೆ ಸಂಶೋಧನಾ ಕೇಂದ್ರ, ಕುಂಬಾಪುರ
4. ತೋಟಗಾರಿಕೆ ಸಂಶೋಧನಾ ಕೇಂದ್ರ, ತಿಡಗುಂಡಿ
5. ಮೆಣಸು ಸಂಶೋಧನಾ ಕೇಂದ್ರ, ಶಿರಸಿ
6. ಮುಸುಕಿನ ಜೋಳ ಬೆಳೆದ ಪ್ರದೇಶವನ್ನು ಹೊರತುಪಡಿಸಿ ಮೆಣಸಿನಕಾಯಿ ಸಂಶೋಧನಾ ಕೇಂದ್ರ, ದೇವಿ ಹೊಸೂರು
7. ಬೀದರ್ ತೋಟಗಾರಿಕೆ ಕಾಲೇಜು, ಹೊಸ ಪ್ರದೇಶವನ್ನು ಸ್ವಾಧೀನ ಪಡಿಸಿಕೊಳ್ಳುವವರೆಗೆ ಮತ್ತು ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಸ್ಥಾಪಿಸುವವರೆಗೆ ಜನವಾಡ ಸಂಶೋಧನಾ ಕೇಂದ್ರದಲ್ಲಿ ಕಾರ್ಯನಿರ್ವಹಿಸತಕ್ಕದ್ದು.
8. ಬಾಗಲಕೋಟೆ ತೋಟಗಾರಿಕೆ ಕಾಲೇಜು.

ಈ ಮೇಲೆ ಪಟ್ಟಿ ಮಾಡಿದ ಎಲ್ಲಾ ಸಂಸ್ಥೆಗಳು, ತೋಟಗಾರಿಕೆ ಕಾಲೇಜುಗಳು, ಸಂಶೋಧನಾ ಕೇಂದ್ರಗಳು, ತೋಟಗಾರಿಕೆ ಬೆಳೆಗಳ ಮೇಲಿನ ಅಖಿಲ ಭಾರತ ಸಮನ್ವಯ ಯೋಜನೆಗಳು ಹಾಗೂ ಆವರ್ತಕ ನಿಧಿಗಳು ಇವುಗಳನ್ನು ಮೂಲಭೂತ ಸೌಲಭ್ಯಗಳು ಕಟ್ಟಡಗಳು, (ಬೋಧಕ ಮತ್ತು ಬೋಧಕೇತರ) ಸಿಬ್ಬಂದಿ, ಸ್ಥಿರ ಮತ್ತು ಚರ ಸ್ವತ್ತುಗಳ ಸಮೇತವಾಗಿ ತೋಟಗಾರಿಕೆ ವಿಶ್ವವಿದ್ಯಾಲಯಕ್ಕೆ ವರ್ಗಾವಣೆಗೊಳ್ಳತಕ್ಕದ್ದು.

**ಹೆಚ್.ಆರ್.ಭಾರದ್ವಾಜ್**
ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಕೆ.ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ

## KARNATAKA ORDINANCE NO. 1 OF 2010

(Promulgated by the Governor of Karnataka in the sixty first year of the Republic of India and First Published in the Karnataka Gazette Extra-Ordinary on the 11th day of February 2010)

## THE UNIVERSITY OF HORTICULTURAL SCIENCES ORDINANCE, 2010.

An Ordinance to provide for establishment and incorporation of a separate University for Horticulture in the State of Karnataka and matters connected therewith;

Whereas it is expedient to provide for the establishment and incorporation of a separate University for Horticulture in the State of Karnataka and to provide for matters connected therewith or incidental thereto;

Whereas both Houses of the State Legislature are not in session and the Governor of Karnataka is satisfied that circumstances exist which render it necessary for him to take immediate action to establish and incorporate separate University dedicated for Study and Research of Horticultural Sciences through systematic instruction, teaching and training in Horticultural Sciences and to inculcate among citizens a sense of meaningful concern for the Horticultural Sciences in a system of parliamentary democracy in the State of Karnataka.

Now, therefore, in exercise of the powers conferred by clause (1) of Article 213 of the Constitution of India, the Governor of Karnataka is pleased to promulgate the following Ordinance, namely:-

### CHAPTER-I

### PRELIMINARY

**1. Short title and commencement** –(1) This Ordinance may be called the University of Horticultural Sciences Ordinance, 2010.

(2) It shall deemed to have come into force from 22nd November 2008.

**2. Definitions.-** In this Ordinance, unless the context otherwise requires,-

(1) "Academic Council" means the Academic Council of the University;

(2) "Affiliated college" means a college or an Institution within the University jurisdiction and affiliated to the University in accordance with the statutes prescribed and providing courses of study for admission to the examination for Degrees, Diplomas or other academic distinctions of the University;

(3) "Authority" means any Authority of the University specified in section 11;

(4) "Board" means the Board of Management of the University;

(5) "Board of Studies" means academic affairs committee at faculty level;

(6) "Campus" means a premises which includes college, Hostels, staff residences, farm land and other assets associated with teaching, research and extension activity relating to horticulture;

(7) "College" means a constituent college of the University under its direct control and management whether located at the Headquarters, campus or elsewhere;

(8) "Chancellor" means the Chancellor of the University;

(9) "Comptroller" means the Comptroller of the University;

(10) "Dean" means Head of the Constituent College or Post Graduate Studies of the University;

(11) "Dean-Student Welfare" means Dean of student welfare, counseling and student placement;

(12) "Director" includes the Director of Education, Director of Research and Director of Extension;

(13) "Distance Education" means is a field of education that aims to deliver education to students who are physically off site rather than attending courses in person, teachers and students may communicate at times of their own choosing by exchanging printed/electronic/other technology media;

(14) "Extension Council" means Extension Education Council of the University;

(15) "Extension Education" means the educational activities concerned with the training of farmers, home makers, entrepreneurs and other groups concerned with horticulture and allied sciences and various phases of scientific technology related to horticultural production and marketing and includes demonstration to carry forward the new technology and innovation to farms and farm homes through the departments of University, Vignan Kendras and its affiliated colleges;

(16) "Faculty" means Faculty in the University, as specified in the Ordinance and the statutes;

(17) "Government" means the Government of Karnataka;

(18) "Head of the Department" means Head of a Department of the University and Constituent Colleges;

(19) "Horticulture" includes the basic and applied sciences of,-

(a) All aspects of Horticultural crops such as vegetables, fruits, flowers, spices, plantation crops, medicinal and aromatic crops etc.,

(b) Agricultural crops;

(c) Natural Resource Management;

(d) Soil and Water Management;

(e) Crop improvement including Production and protection;

(f) Irrigation and weed Management;

(g) Production of Seed and Plant Material;

(h) Land use planning and Management;

(i) Land scaping;

(j) Horti-silviculture, Farm-Forestry and Forest and Wild life Management;

(k) Economics;

(l) Marketing, Co-operation and Business Management;

(m) Food Science and Technology;

(n) Post harvest Management including processing;

(o) Bio-Technology;

(p) Mushroom Culture;

(q) Engineering;

(r) Veterinary and Animal Sciences including poultry;

(s) Dairy Science and Technology;

(t) Psiciculture and Fisheries Management;

(u) Rural Development;

(v) Basic Sciences and Humanities;

(w) Apiculture and Sericulture;

(x) Any other subject related to Horticulture as suggested by the Government/ICAR.

(20) "Horticultural Research Station" means Zonal Horticultural Research Station, Main Horticultural Research Station, Regional Horticultural Research Station, Horticultural Research Station or any other research station of the University;

(21) "Hostel" means a place of residence for students of the University maintained or recognized by the University either as a part of or separate from the University;

(22) "Officer" means officer of the University as specified in the Ordinance or Statutes;

(23) "Public Private Partnership" means joint venture between university and public/private Organizations for the development and promotion of Horticulture;

(24) "Research" means the development of technologies;

(25) "Revolving Fund" means the budget allotted to the individuals/institutions for developing technologies, seed and planting material and to revolve the money for the further development;

(26) "Prescribed" means prescribed by the statutes of the University;

(27) "Registrar" means the Registrar of the University;

(28) "Regulations" means the regulations made under section 49;

(29) "Research Council" means Research Council of the University;

(30) "Schedule" means Schedule appended to this Ordinance.

(31) "Statutes" means the Statutes of the University covering governing matters of policy, procedure etc made under this Ordinance;

(32) "Student" means a person admitted and enrolled in a constituent college or an affiliated college of the University for pursuing a course of study for a degree, diploma or other academic distinction duly instituted;

(33) "Teacher" means a person not below the rank of an Assistant Professor appointed or recognized by the University for the purpose of imparting instructions or conducting and guiding research and/or extension education programmes, and may include any other person who may be declared by the Statutes to be a teacher;

(34) "Transfer of Technology (TOT) units" means Vigyan Kendra, Extension Education Units (EEUs), Staff Training Units (STU), Horticultural Technology Information Centre (HTIC), Bakery Training Unit (BTU), Post Harvest Technology Institute (PHTI) and such other centers established by the University;

(35) "Unit" means college /Research station/extension education units/ Thotagarike Vigynana Kendras and other institutes concerned with Horticulture;

(36) "University" means University of Horticultural Sciences established under section 3;

(37) "University area"means the area under the jurisdiction of the University;

(38) "Vice-Chancellor" means the Vice-Chancellor of the University;

(39) "Vignana Kendras" means Thotagarike Vignana Kendra (TVK), Krishi Vignana Kendra (KVK).

## CHAPTER - II

### *THE UNIVERSITY*

**3. Establishment and incorporation of the University.-** (1) As soon as from the date of commencement of this Ordinance there shall be an University established in the State by the name " University of Horticultural Sciences."

(2) The University shall be a body corporate having perpetual succession and a common seal and shall sue and be sued by its name.

(3) The University shall consist of a Chancellor, a Vice-Chancellor, Board of Management, Academic Council, Research Council, Extension Council and other authorities and officers and constituent bodies as set forth in this Ordinance or as provided in the Statutes.

(4) The University shall be competent to acquire and hold property, both movable and immovable, to lease, sell or otherwise transfer any movable or immovable property which may have become vested or have been acquired by it for the purpose of the University with the prior approval of the State Government and to borrow money from the Central Government, State Government or any other approved sources and do all other things necessary for the purpose of this Ordinance.

(5) In all suits and other legal proceedings by or against the University, the pleading shall be signed and verified and all processes in such suits and proceedings shall be issued to and served on the Registrar.

(6) The Headquarters of the University shall be at Bagalkot.

**4. Territorial jurisdiction and constituent bodies.-** (1) With respect to teaching at the University or college level, research and extension education programmes in the field of horticulture, defined in this Ordinance, the territorial jurisdiction and responsibility of this University shall extend to the State of Karnataka.

(2) On and from the date of establishment of the University, no new college imparting education in Horticulture shall be established except as a constituent or affiliated college of the University.

(3) All Horticulture Colleges, Horticultural Research Stations, Thotagarike Vignan Kendras and other institutions coming under the jurisdiction and authority of the University shall come in as constituent units of the University under the full management and control of the University officers and authorities. No unit shall be recognized as an affiliated college unless otherwise recognized as affiliated college by the University.

(4) The University may assume responsibility for the establishment, development including research, extension and operations of its constituent bodies in the territorial jurisdiction and abroad as may be required

(5) University may have collaboration of academic programmes for research projects having multi disciplinary approach with other Universities or reputed Universities in India and abroad.

**5. Objectives of the University.-** The University shall be deemed to have been established and incorporated with the following objects, namely;-

(a) To make provision for imparting education towards development of quality human resource in different branches of study as stated under clause (20) of section 2;

(b) To further the advancement of learning including distance education and conducting of research, particularly in horticulture and other allied sciences;

(c) To undertake the extension education of such science and technologies, specially for the rural people of the State;

(d) To promote partnership and linkages with national and international educational, Industries, research institutes of Semi Government / Government / Private and others;

(e) Such other objects as the State Government may by notification in the official Gazette specify from time to time.

**6. Admission to the University:** (1) The University shall, subject to the provisions of this Ordinance and the Statutes, be open to all persons:

Provided that nothing in this section shall require the University to admit to any course of study any person who does not meet the prescribed academic standards, for admission or to retain on the rolls of the University or persons whose academic records are below the minimum standard required for the award of a degree or whose personal conduct is prejudicial to the interest of the University or such as to be inimical to the purpose of the University or to the appropriate rights and privileges of other students and staff:

Provided further that nothing in this section shall be deemed to require the University to admit to any course of study a larger number of students than that can be accommodated in the available faculties of the University or of any particular college or Department as determined by the Academic Council.

(2) Subject to sub-section (1), the State Government may direct that the University shall reserve in colleges seats for women, the persons belonging to the Scheduled Castes and the Scheduled Tribes, agriculturists or the children of agriculturists and candidates from other states , foreign students who possess the minimum qualification prescribed in this behalf and who pass such practical tests in agriculture or horticulture as the Government may by order specify. Children and wards of freedom fighters, defence personnel and ex-serviceman and such socially and educationally backward classes of

citizens as may be declared by the Government in this behalf and where such direction has been given, the University shall make reservation accordingly.

**Explanation:** For the purpose of this sub-section, -

(i) 'Agriculturist' means a person who as owner holds land and whose main source of income is from personal cultivation of land and includes any person whose principal means of livelihood is from manual labour in agricultural lands; and

(ii) 'Freedom fighter' means a person of the category declared by the Government from time to time as such.

**7. Powers and Functions of the University.-** The University shall have the following powers and functions, namely:-

(1) to provide for undergraduate and postgraduate instructions in horticulture and other allied branches of learning as the University may deem fit;

(2) to provide for conducting of research in horticulture and allied branches of learning;

(3) to provide for dissemination of the findings of research and technical information through extension education programme;

(4) to institute course of study and hold examinations and confer degrees, diplomas and other academic distinctions on persons who have pursued a prescribed course of study or research or both in the University including part time courses and/or research carried out in any other University or recognized institutions for this purpose;

(5) to confer honorary degrees and other distinctions as may be prescribed;

(6) to provide training for farmers field workers, village leaders and other persons not enrolled as regular students of the University;

(7) to collaborate with other universities and institutions in such manner and for such purposes as the university may determine, subject to the limitations set forth in section 4;

(8) to establish and maintain colleges and other institutions relating to horticulture and allied Sciences;

(9) to establish and maintain laboratories, libraries, research stations and institutions and museums for teaching, research and extension education;

(10) to create teaching, research and extension education posts and to appoint persons to such posts;

(11) to create administrative and other posts and to appoint persons to such posts;

(12) to institute and award fellowships, scholarships, stipends and prizes in accordance with the Statutes;

(13) to institute and maintain residential accommodations for students and staff of the University;

(14) to fix, demand and receive such fees and other charges as may be prescribed;

(15) to supervise and control the residence, conduct and discipline of the students of the University, and to make arrangements for promoting their health and welfare;

(16) to accept donations from foreign countries and from within the country;

Provided that no donations from a foreign country, foreign foundation or from any person in such country shall be accepted by the University save with the prior approval of the Government.

(17) to allow the university to admit to its privileges the institutions functioning outside India;

(18) to grant affiliation to private horticultural institutions to conduct instruction in horticulture and allied sciences as decided under various statutes;

(19) to do all such acts and things whether incidental to the powers aforesaid or not as may be required in furtherance of the objects of the university.

**8. Transfer of certain Colleges, Institutions and employees of the University.-** (1) Notwithstanding anything contained in the Karnataka Universities of Agricultural Sciences Act, 1963 (Karnataka Act 22 of 1963), the colleges, research stations, All India Co-ordinated Research Projects on horticultural crops and other institutions and also the farms of State Departments of Horticulture and Agriculture specified in the schedule-I and the attached hostels and other buildings together with the articles of furniture, libraries, books, laboratory, stores, instruments, apparatus, appliances and equipments, revolving funds and all other property both movable and immovable owned and managed by the University of Agricultural Sciences, Dharwad and the University of Agricultural Sciences, Bangalore

